RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜೂನ್ ೬, ೨೦೧೩ (ಜ್ಯೇಷ್ಠ ೧೬, ಶಕ ವರ್ಷ ೧೯೩೫)<br>Bangalore, Thursday, June 6, 2013 (Jyeishta 16, Shaka Varsha 1935) | ಸಂಚಿಕೆ ೨೩<br>Issue 23 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟ.

**ಅಧಿಸೂಚನೆ ಸಂಖ್ಯೆ : 01/2013 ದಿನಾಂಕ: 08-05-2013**

**ವಿಷಯ :** ಶೀಘ್ರಲಿಪಿಗಾರರು, ಬೆರಳಚ್ಚುಗಾರರು ಮತ್ತು ಸಿಪಾಯಿ ಹುದ್ದೆಗಳಿಗೆ ನೇರ ನೇಮಕಾತಿ.

**ಉಲ್ಲೇಖ :** 1) ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಲ್.ಸಿ.ಎ-2.128/2012 ದಿನಾಂಕ: 21-01-2013.

2) ಈ ನ್ಯಾಯಾಲಯದ ಕಚೇರಿ ಟಿಪ್ಪಣಿ ದಿನಾಂಕ: 08-05-2013 ಮತ್ತು ಅದರ ಮೇಲಿನ ಆದೇಶ.

ಮೇಲ್ಕಂಡ ಅಧಿಸೂಚನೆಯನ್ವಯ ಬಾಗಲಕೋಟ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಹಾಗೂ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಈ ಕೆಳಕಂಡ ಹುದ್ದೆಗಳಿಗಾಗಿ ನಿಗಧಿತ ನಮೂನೆಯಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಇಚ್ಛೆಯುಳ್ಳ ಅಭ್ಯರ್ಥಿಗಳು ಎಲ್ಲ ಅಂಕಣಗಳನ್ನು ಭರ್ತಿ ಮಾಡಿ ಅರ್ಜಿಯ ಜೊತೆಗೆ ದಾಖಲಾತಿಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ, ಈ ವಿಳಾಸಕ್ಕೆ ನಿಗದಿತ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 14-06-2013 ಸಾಯಂಕಾಲ 05-00 ಗಂಟೆ**

**1) ನೇರ ನೇಮಕಾತಿಗಾಗಿ ನಿಗದಿಪಡಿಸಿದ ಹುದ್ದೆಗಳ ಸಂಖ್ಯೆ ಹಾಗೂ ವರ್ಗೀಕರಣ:-**

| ಕ್ರ.ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಹುದ್ದೆಗಳು | ಮೀಸಲಾತಿ | ವರ್ಗೀಕರಣ | | | | | |
|---|---|---|---|---|---|---|---|---|---|
| | | | | ಇತರೆ | ಗ್ರಾಮೀಣ | ಮಹಿಳೆ | ಅಂಗವಿಕಲ | ಮಾಜಿ ಸೈನಿಕ | ಯೋಜನಾ ನಿರಾಶ್ರಿತ |
| 1 | 2 | 3 | 4 | 5 | 6 | 7 | 8 | 9 | 10 |
| 1 | **ಶೀಘ್ರಲಿಪಿಗಾರರು** 14550-350-15600-400-17200-450-19000-500-21000-600-24600-700-26700(ಇತರೆ ಭತ್ಯೆಗಳು) | 01 | ಪ್ರವರ್ಗ-2ಬಿ | - | - | 1 | - | - | - |
| | | | **ಒಟ್ಟು** | - | - | **1** | - | - | - |
| 2 | **ಬೆರಳಚ್ಚುಗಾರರು** 11600-200-12000-250-13000-300-14200-350-15600-400-17200-450-19000-500-21000 (ಇತರೆ ಭತ್ಯೆಗಳು) | **01** | ಸಾಮಾನ್ಯ ಅಭ್ಯರ್ಥಿ | - | - | - | - | 1 | - |
| | | | **ಒಟ್ಟು** | - | - | - | - | **1** | - |

| ಕ್ರ.ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಹುದ್ದೆಗಳು | ಮೀಸಲಾತಿ | ವರ್ಗೀಕರಣ | | | | | |
|---|---|---|---|---|---|---|---|---|---|
| | | | | ಇತರೆ | ಗ್ರಾಮೀಣ | ಮಹಿಳೆ | ಅಂಗವಿಕಲ | ಮಾಜಿ ಸೈನಿಕ | ಯೋಜನಾ ನಿರಾಶ್ರಿತ |
| 3 | ಸಿಪಾಯಿ 9600–200–12000–250–13000–300–14200–350–14550 (ಇತರೆ ಭತ್ಯೆಗಳು) | 02 | ಪರಿಶಿಷ್ಟ ಜಾತಿ | – | – | – | – | 1 | – |
| | | | ಸಾಮಾನ್ಯ ಅಭ್ಯರ್ಥಿ | – | – | – | – | 1 | – |
| | | | ಒಟ್ಟು | – | – | – | – | 2 | – |

**2) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ :–**

| ಕ್ರಮ ಸಂಖ್ಯೆ | ಹುದ್ದೆ | ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ |
|---|---|---|
| 01 | ಶೀಘ್ರಲಿಪಿಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಮತ್ತು<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ |
| 02 | ಬೆರಳಚ್ಚುಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಮತ್ತು<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಗಳ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ |
| 03 | ಸಿಪಾಯಿ | 1) 7 ನೇ ವರ್ಗದ ಪರೀಕ್ಷೆಯಲ್ಲಿ ಉತ್ತೀರ್ಣತೆ ಮತ್ತು<br>2) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು. |

**3) ವಯೋಮಿತಿ :–**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಪ್ರವರ್ಗ | ಕನಿಷ್ಠ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ ವರ್ಗ | 18ವರ್ಷ | 35 ವರ್ಷ |
| 2 | ಪ್ರವರ್ಗ 2ಎ, 2ಬಿ, 3ಎ, 3ಬಿ | | 38 ವರ್ಷ |
| 3 | ಪರಿಶಿಷ್ಟ ಜಾತಿ ፡ ಪರಿಶಿಷ್ಟ ಪಂಗಡ ፡ ಪ್ರವರ್ಗ–1 | | 40 ವರ್ಷ |

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವದು.

**4) ಆಯ್ಕೆ ವಿಧಾನ :–**

**1)** ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವದು. ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವದು ಮತ್ತು ನಿರ್ಧಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುವದು.

**2)** ಶೀಘ್ರಲಿಪಿಗಾರ ಹುದ್ದೆಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವದು. ಇದಕ್ಕೆ 100 ಗರಿಷ್ಟ ಅಂಕಗಳನ್ನು ನಿಗದಿಪಡಿಸಿದ್ದು, ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನಡೆಸಲಾದ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

3) ಬೆರಳಚ್ಚುಗಾರ ಹುದ್ದೆಗೆ ಬೆರಳಚ್ಚು ಮಾಡಲು 15 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಇದಕ್ಕೆ 100 ಗರಿಷ್ಟ ಅಂಕಗಳನ್ನು ನಿಗದಿಪಡಿಸಿದ್ದು, ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ, ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನೆಡಸಲಾದ ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

**4) ಸೂಚನೆಗಳು :–**

1) ಅಭ್ಯರ್ಥಿಗಳು ತಾವು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸಿದ್ದಾರೆ ಎಂಬುವದನ್ನು ಲಕೋಟೆಯ ಮೇಲೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

2) ಅಭ್ಯರ್ಥಿಗಳು ನಿರ್ದಿಷ್ಟ ಪಡಿಸಿದ ಅರ್ಜಿ ನಮೂನೆಯಲ್ಲಿ ತಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವನ್ನು ಅಂಟಿಸಿ ಅದರ ಜೊತೆಗೆ ಸ್ವ–ವಿಳಾಸವಿರುವ 5 ರೂಪಾಯಿ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸತಕ್ಕದ್ದು.

3) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

4) ಅಭ್ಯರ್ಥಿಗಳನ್ನು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಗುಣಗಳ ಆಧಾರದ ಮೇಲೆ ಸಂದರ್ಶನಕ್ಕೆ ಕರೆಯಬೇಕಾಗಿರುವದರಿಂದ, ಅವರು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿದ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿಗಳ ನಕಲುಗಳನ್ನು ಕಡ್ಡಾಯವಾಗಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು. ಇಲ್ಲವಾದಲ್ಲಿ ಅವರುಗಳ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.

5) ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ದಾಖಲೆಯನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

6) ಮೀಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸಿದ ಅಭ್ಯರ್ಥಿಗಳು ಸರಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

7) ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವದು.

8) ಬೆರಳಚ್ಚು ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

9) ಸರಕಾರಿ ಸೇವೆಯಲ್ಲಿರುವವರು ತಮ್ಮ ಮೇಲಾಧಿಕಾರಿಗಳಿಂದ ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು ಪಡೆದು ಸಮುಚಿತ ಮಾರ್ಗದ ಮುಖಾಂತರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

10) ಅಪೂರ್ಣ ಮತ್ತು ಕಡ್ಡಾಯವಾಗಿ ಲಗತ್ತಿಸಬೇಕಾದ ದಾಖಲಾತಿಗಳನ್ನು ಲಗತ್ತಿಸಲಾರದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.

11) ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ : ಕಾಲೇಜಿನ ಮುಖ್ಯೋಪಾಧ್ಯಾಯರು : ಪ್ರಾಶುಂಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸುವದು.

12) ಅಭ್ಯರ್ಥಿಯ ನಡತೆಯನ್ನು ದೃಢೀಕರಿಸುವ ಬಗ್ಗೆ ಅವನು ಓದಿರುವ ವಿದ್ಯಾ ಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಕರಲ್ಲದ ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಒಳಗಿರುವ ಎರಡು ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸುವದು.

**ವಿಶೇಷ ಸೂಚನೆಗಳು :–**

1) ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.

2) ಯಾವುದೇ ಅಭ್ಯರ್ಥಿಯು ಸರ್ಕಾರಿ : ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಬಾಹ್ಯ ಬೆಂಬಲವನ್ನು ಪಡೆಯಲು ಪ್ರಭಾವ ಬೀರಿದಲ್ಲಿ, ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

4) ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

5) ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಸ್ಥಳ : ಬಾಗಲಕೋಟ** **ವ್ಹಿ. ಎಚ್. ಕುಲಕರ್ಣಿ**

**ದಿನಾಂಕ : 08–05–2013** **ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**

**ಅರ್ಜಿ ನಮೂನೆ**

**ಬಾಗಲಕೋಟ ಜಿಲ್ಹೆಯ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರ / ಬೆರಳಚ್ಚುಗಾರ / ಸಿಪಾಯಿ / ಹುದ್ದೆಗೆ ಅರ್ಜಿ**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ : 14–06–2013)**

**ಗೆ,**

ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ಬಾಗಲಕೋಟ.

ಮಾನ್ಯರೇ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ : 01 / 2013 ದಿನಾಂಕ : 08–05–2013 ರ ಪ್ರಕಟಣೆ ಮೇರೆಗೆ ನಾನು ಈ ಕೆಳಕಂಡ ಮಾಹಿತಿಗಳೊಂದಿಗೆ "____________________" ಹುದ್ದೆಗೆ ಹಾಗೂ "________________________" ಮೀಸಲಾತಿ ಅಡಿಯಲ್ಲಿ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | |
|---|---|---|---|---|
| 1) | ಅಭ್ಯರ್ಥಿಯ ಪೂರ್ಣ ಹೆಸರು<br>(ದಪ್ಪ ಅಕ್ಷರಗಳಲ್ಲಿ) | | | |
| 2) | ತಂದೆ ಃ ಗಂಡನ ಹೆಸರು | | | |
| 3) | ತಾಯಿಯ ಹೆಸರು | | | |
| 4) | ಸಂಪೂರ್ಣ ಅಂಚೆ ವಿಳಾಸ | | | |
| 5) | ದೂರವಾಣಿ ಃ ಮೊಬೈಲ್ ಸಂಖ್ಯೆ | | | |
| 6) | ಜನ್ಮ ದಿನಾಂಕ ಃ<br>(ಸೂಕ್ತ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸುವದು) | | | |
| 7) | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳು | ದಿನಗಳು |
| 8) | ಲಿಂಗ | ಪುರುಷ | ಮಹಿಳೆ | |
| 9) | ರಾಷ್ಟ್ರೀಯತೆ | | | |
| 10) | ಧರ್ಮ ಮತ್ತು ಜಾತಿ | | | |
| 11) | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| 12) | ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಗಂಡಃ ಹೆಂಡತಿ ಇದ್ದಾರೆಯೇ? | | | |
| 13) | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | | | |
| 14) | ನೀವು ಸರಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ? ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | |
| 15) | ನೀವು ಸರಕಾರಿ ಸೇವೆಯಲ್ಲಿ ಇದ್ದಲ್ಲಿ ಅದರ ವಿವರ (ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| | ಶೈಕ್ಷಣಿಕ ವಿದ್ಯಾರ್ಹತೆ | ಗರಿಷ್ಟ ಅಂಕಗಳು | ಪಡೆದ ಅಂಕಗಳು | ಶೇಕಡಾವಾರು |
| | 1) 7 ನೇ ತರಗತಿ | | | |
| | 2) ಎಸ್ಎಸ್ಎಲ್‌ಸಿ | | | |
| | 3) ಹಿರಿಯ ಕನ್ನಡ ಶೀಘ್ರಲಿಪಿ | | | |
| | 4) ಹಿರಿಯ ಆಂಗ್ಲ ಶೀಘ್ರಲಿಪಿ | | | |
| | 5) ಹಿರಿಯ ಕನ್ನಡ ಬೆರಳಚ್ಚು | | | |
| | 6) ಹಿರಿಯ ಆಂಗ್ಲ ಬೆರಳಚ್ಚು | | | |
| | 7) ಕಿರಿಯ ಕನ್ನಡ ಬೆರಳಚ್ಚು | | | |
| | 8) ಕಿರಿಯ ಆಂಗ್ಲ ಬೆರಳಚ್ಚು | | | |
| | (ಸೂಕ್ತ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸುವದು) | | | |
| 17) | ಹೆಚ್ಚಿನ ವಿದ್ಯಾರ್ಹತೆಗಳು<br>(ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| 18) | ಯಾವ ಮೀಸಲಾತಿ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತೀರಿ? | | | |
| 19) | ಹೆಚ್ಚಿನ ಸೇವಾ ಅನುಭವ ಇದ್ದಲ್ಲಿ ಅದರ ವಿವರ (ಪ್ರಮಾಣ ಪತ್ರ ಲಗತ್ತಿಸುವದು) | | | |

| | | |
|---|---|---|
| 20) | ಲಗತ್ತಿಸಿದ ದಾಖಲೆಗಳು | 1)<br>2)<br>3)<br>4)<br>5)<br>6)<br>7)<br>8)<br>9)<br>10) |

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಮತ್ತು ಕಾನೂನಿನ ಅನುಸಾರ ನನ್ನ ಮೇಲೆ ಸೂಕ್ತ ಕ್ರಮವನ್ನು ಕೈಕೊಳ್ಳಬಹುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**ಸೂಚನೆ :** ಅಭ್ಯರ್ಥಿಗಳು ಅರ್ಜಿಯ ಜೊತೆಗೆ 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

**PR.64**

## ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001.

## ಅಧಿಸೂಚನೆ

**ಸಂಖ್ಯೆ:ಇಪ(1)47/2013–14/ಪಿಎಸ್‌ಸಿ.ದಿನಾಂಕ: 08–05–2013.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಡೆಸುವಿಕೆ) ನಿಯಮಗಳು, 1965 ಮತ್ತು ಕರ್ನಾಟಕ ನಾಗರಿಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1974ರ ಮೇರೆಗೆ ಆಯೋಗವು **2013ನೇ ಸಾಲಿನ ಪ್ರಥಮ** ಅಧಿವೇಶನದ ಇಲಾಖಾ ಪರೀಕ್ಷೆಗಳನ್ನು ನಡೆಸಲು ಕರ್ನಾಟಕ ನಾಗರಿಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ. ಈ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್‌ಸೈಟ್ **"http://kpsc.kar.nic.in"** ನಲ್ಲಿ ಬಿತ್ತರಿಸಲಾಗಿದೆ. ಈ ಪರೀಕ್ಷೆಗಳನ್ನು 2013ರ **ಆಗಸ್ಟ್** ಮಾಹೆಯಲ್ಲಿ ನಡೆಸಲಾಗುವುದು.

ಈ ಅಧಿಸೂಚನೆಯ ಅನುಬಂಧ–**'ಎ'** ಯಲ್ಲಿನ ಪರೀಕ್ಷಾ ವೇಳಾಪಟ್ಟಿಯಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಸಲಾಗುವ ಪರೀಕ್ಷೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಅನುಬಂಧ–**'ಬಿ'** ನಲ್ಲಿ ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಯುವ ಪರೀಕ್ಷೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ.

ಪರೀಕ್ಷೆಗೆ ಹಾಜರಾಗಬಯಸುವ ಅಭ್ಯರ್ಥಿಗಳು ಒಂದು ಅರ್ಜಿಯಲ್ಲಿ ಗರಿಷ್ಠ ಆರು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವಾಗ ವಿಷಯ ಮತ್ತು ವಿಷಯ ಸಂಕೇತಗಳನ್ನು ಎಚ್ಚರಿಕೆಯಿಂದ ಭರ್ತಿ ಮಾಡಲು ಸೂಚಿಸಿದೆ.

**1. ಸೂಚನೆಗಳು:**

1. ಅನುದಾನಿತ/ಖಾಸಗಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಿಗೆ ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.
2. ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು ಕಡ್ಡಾಯವಾಗಿ ನಿಗದಿಪಡಿಸಿರುವ ಪರೀಕ್ಷಾ ಶುಲ್ಕವನ್ನು ಪಾವತಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಶುಲ್ಕ ಪಾವತಿಸದ ಹಾಗೂ ಅಪೂರ್ಣ ಅರ್ಜಿಗಳನ್ನು ಮತ್ತು ಕೊನೆಯ ದಿನಾಂಕದ ನಂತರ ಸಲ್ಲಿಸಿದ ಹಾಗೂ ಆನ್‌ಲೈನ್ ವಿಧಾನ ಹೊರತುಪಡಿಸಿ ಇತರ ಯಾವುದೇ ವಿಧಾನದಲ್ಲಿ ಸಲ್ಲಿಸಿದ ಅರ್ಜಿಗಳನ್ನು ಯಾವ ಸೂಚನೆಯನ್ನು ನೀಡದೇ ತಿರಸ್ಕರಿಸಲಾಗುವುದು.
4. ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವ ಮುನ್ನ On-line ನಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಿ ಈ ಸೂಚನೆಗಳಿಗೆ ಅನುಸಾರವಾಗಿಯೇ ಭರ್ತಿ ಮಾಡತಕ್ಕದ್ದು.
5. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹ ಅಭ್ಯರ್ಥಿಗಳ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮಕೈಗೊಳ್ಳುವುದು.
6. ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಯಲ್ಲಿ ಸಂದಾಯ ಮಾಡಬಹುದಾಗಿದ್ದು, ಈ ಬ್ಯಾಂಕನ್ನು ಹೊರತುಪಡಿಸಿ ಬೇರೆ ಯಾವುದೇ ಬ್ಯಾಂಕಿನಲ್ಲಿ ಶುಲ್ಕ ಸಂದಾಯ ಮಾಡಲಾಗುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
7. ಕೊನೆಯ ಕ್ಷಣಗಳಲ್ಲಿ ಎದುರಾಗಬಹುದಾದ ಸಮಸ್ಯೆಗಳಿಂದ ಪಾರಾಗಲು ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ಕಾಯದೇ ಸಾಕಷ್ಟು ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸಲು ಪ್ರಯತ್ನಿಸತಕ್ಕದ್ದು. ಒಮ್ಮೆ ಅರ್ಜಿ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

8. ಅಭ್ಯರ್ಥಿಯು ತನ್ನ ಹುದ್ದೆಗೆ ಸಂಬಂಧಿಸಿದಂತೆ 1974ರ ಕ.ನಾ.ಸೇ (ಸೇವೆ ಮತ್ತು ಕನ್ನಡಭಾಷಾ ಪರೀಕ್ಷೆ) ನಿಯಮಾವಳಿ ರೀತ್ಯಾ ಷೆಡ್ಯೂಲ್ II ರಲ್ಲಿ ಕಡ್ಡಾಯಗೊಳಿಸಿದ ವಿಷಯಗಳಿಗೆ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು ಹಾಗೂ ತನಗೆ ಸಂಬಂಧಪಡದ ಇತರ ಇಲಾಖೆಗಳ ವಿಷಯಗಳಲ್ಲಿ ಪರೀಕ್ಷೆ ಬರೆಯಲು ಅರ್ಜಿಯನ್ನು ಯಾವುದೇ ಕಾರಣಕ್ಕೂ ಸಲ್ಲಿಸತಕ್ಕದ್ದಲ್ಲ. ಹಾಗೆಯೇ ಅಭ್ಯರ್ಥಿಯು ತಾನು ಶುಲ್ಕ ಸಂದಾಯ ಮಾಡಿರುವೆನೆಂದ ಮಾತ್ರಕ್ಕೆ ಪರೀಕ್ಷೆ ಬರೆಯಲು ಹಕ್ಕುಳ್ಳವನಾಗಿರುವನೆಂದು ಭಾವಿಸತಕ್ಕದ್ದಲ್ಲ.

**2. ಅಭ್ಯರ್ಥಿಗಳು ಆನ್‌ಲೈನ್ (On-line) ಮುಖಾಂತರ ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅನುಸರಿಸಬೇಕಾದ ಹಂತಗಳನ್ನು ಅನುಕ್ರಮವಾಗಿ ಈ ಕೆಳಕಂಡಂತೆ ವಿವರಿಸಲಾಗಿದೆ.**

ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಮುನ್ನ **35 x 45mm** (ಜೆಪಿಜಿ) ಅಳತೆಯ ಭಾವಚಿತ್ರವನ್ನು ಶುದ್ಧವಾದ ಬಿಳಿಯ ಹಾಳೆಯ ಮೇಲೆ ಅಂಟಿಸಿ ಅದರ ಕೆಳಗೆ ಕಪ್ಪು ಶಾಹಿಯ ಪೆನ್‌ನಲ್ಲಿ ಸಹಿ ಮಾಡಿದ ನಂತರ ಸ್ಕ್ಯಾನ್ ಮಾಡಿ **UPLOAD** ಮಾಡಲು ಸಿದ್ಧವಾಗಿಟ್ಟುಕೊಂಡಿರಬೇಕು.

ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ **http://kpsc.kar.nic.in** ನಲ್ಲಿ **ONLINE APPLICATION FOR DEPARTMENTAL EXAM-FIRST SESSION 2013** ಲಿಂಕನ್ನು ಕ್ಲಿಕ್ ಮಾಡಿದ ನಂತರ ಅರ್ಜಿ ಸಲ್ಲಿಸಲು ಬೇಕಾದ ಸೂಚನೆಗಳನ್ನು ವೀಕ್ಷಿಸಲು **HOME PAGE** ನಲ್ಲಿನ **'INSTRUCTIONS TO CANDIDATES'** ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು.

ಅರ್ಜಿಯನ್ನು ಸಲ್ಲಿಸಲು **'SUBMIT APPLICATION FORM '** ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಅರ್ಜಿಯಲ್ಲಿ ವಿವರಗಳನ್ನು ಭರ್ತಿ ಮಾಡಿ ಸ್ಕ್ಯಾನ್ ಮಾಡಿಕೊಂಡಿರುವ ಫೋಟೋವನ್ನು **UPLOAD** ಮಾಡಿದ ನಂತರ **`Preview'** ಬಟನ್ ಒತ್ತಿ ಅರ್ಜಿಯಲ್ಲಿ ನಮೂದಿಸಿರುವ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ನೋಡಿಕೊಳ್ಳಬೇಕು. ನಮೂದಿಸಿರುವ ವಿವರಗಳಲ್ಲಿ ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು **'Edit'** ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು. ಆನಂತರ ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡ ತರುವಾಯ, **`Submit'** ಬಟನ್ ಅನ್ನು ಒತ್ತಬೇಕು. ಆ ನಂತರ ಪರದೆಯ ಮೇಲೆ ಮೂಡುವ Application Number (ಅರ್ಜಿಯ ಸಂಖ್ಯೆ) ಅನ್ನು ಅಭ್ಯರ್ಥಿಯು ಗುರುತು ಹಾಕಿಕೊಳ್ಳತಕ್ಕದ್ದು. ಮುಂದೆ ಚಲನ್ ಮುದ್ರಿಸಲು ಮತ್ತು ಪ್ರವೇಶ ಪತ್ರವನ್ನು ಪಡೆಯಲು ಈ ಮಾಹಿತಿಗಳು ಅವಶ್ಯವಿರುತ್ತದೆ.

ಅರ್ಜಿಯ ಶುಲ್ಕವನ್ನು ಪಾವತಿಸಲು ಬೇಕಾದ ಬ್ಯಾಂಕ್ ಚಲನ್ ಅನ್ನು ಪಡೆಯಲು **'Generate Bank Challan'** ಎನ್ನುವ ಲಿಂಕನ್ನು ಕ್ಲಿಕ್ ಮಾಡಿ ಚಲನ್ ಅನ್ನು **down load** ಮಾಡಿಕೊಳ್ಳಬೇಕು. ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸಿ ಚಲನ್ ಅನ್ನು **down load** ಮಾಡಿಕೊಂಡ ದಿನದ ನಂತರದ ಬ್ಯಾಂಕಿನ ಕಾರ್ಯನಿರ್ವಹಣೆಯ ಎರಡು ದಿನಗಳ ತರುವಾಯ ಶುಲ್ಕವನ್ನು ಸಿಂಡಿಕೇಟ್ ಬ್ಯಾಂಕಿನ ಯಾವುದೇ ಶಾಖೆಗಳಲ್ಲಿ ಸಂದಾಯ ಮಾಡಬಹುದಾಗಿರುತ್ತದೆ. ಶುಲ್ಕವನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ. ಸಿಂಡಿಕೇಟ್ ಬ್ಯಾಂಕ್ ಅನ್ನು ಹೊರತುಪಡಿಸಿ ಇತರೆ ಯಾವುದೇ ಬ್ಯಾಂಕಿನಲ್ಲಿ ಶುಲ್ಕ ಸಂದಾಯ ಮಾಡುವಂತಿಲ್ಲ. ಶುಲ್ಕ ಸಂದಾಯ ಮಾಡದ ಅರ್ಜಿಗಳನ್ನು ತಿರಸ್ಕೃತಗೊಳಿಸಲಾಗುವುದು.

ಅರ್ಜಿಯ ಪ್ರತಿಯನ್ನು ಮುದ್ರಿಸಿಕೊಳ್ಳಲು ಅಭ್ಯರ್ಥಿಯು **'Print Application'** ಎನ್ನುವ ಲಿಂಕನ್ನು ಕ್ಲಿಕ್ ಮಾಡಬೇಕು. ಅರ್ಜಿಯ ಪ್ರತಿಯನ್ನು ಮತ್ತು ಶುಲ್ಕ ಸಂದಾಯ ಮಾಡಿದ ಚಲನ್‌ಅನ್ನು ಕಡ್ಡಾಯವಾಗಿ ಅಭ್ಯರ್ಥಿಗಳು ತಮ್ಮೊಂದಿಗೆ ಇಟ್ಟುಕೊಳ್ಳತಕ್ಕದ್ದು. ಆಯೋಗವು ಅಪೇಕ್ಷಿಸಿದಾಗ ಈ ಚಲನ್ ಅನ್ನು ಹಾಜರುಪಡಿಸಬೇಕು.

ಅಭ್ಯರ್ಥಿಗಳು ಅರ್ಜಿ ಸಂಖ್ಯೆಯ ಮಾಹಿತಿಯನ್ನು ಪಡೆಯಬೇಕಾದಲ್ಲಿ ಆಯೋಗದ ವೆಬ್‌ಸೈಟ್‌ನ **HOME PAGE** ನಲ್ಲಿನ **'Search application ID'** ಲಿಂಕಿನಲ್ಲಿ ಮಾಹಿತಿಗಳನ್ನು ದಾಖಲಿಸಿ ಅರ್ಜಿ ಸಂಖ್ಯೆಯನ್ನು ಪಡೆಯಬಹುದಾಗಿರುತ್ತದೆ. ಜನ್ಮ ದಿನಾಂಕದ ಮಾಹಿತಿಯನ್ನು ಪಡೆಯಲು **'Search Date of Birth'** ಲಿಂಕಿನಲ್ಲಿ ಅಗತ್ಯ ಮಾಹಿತಿಗಳನ್ನು ದಾಖಲಿಸಿ ಜನ್ಮ ದಿನಾಂಕದ ಮಾಹಿತಿಯನ್ನು ಪಡೆಯಬಹುದಾಗಿರುತ್ತದೆ.

➡ ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: : **10–05–2013**

➡ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: : **10–06–2013** ಸಂಜೆ **5.30** ಗಂಟೆ ಆಗಿರುತ್ತದೆ.

➡ ಶುಲ್ಕ ಸಂದಾಯ ಮಾಡಲು ಕೊನೆಯ ದಿನಾಂಕ: : **13–06–2013** ಬ್ಯಾಂಕಿನ ವ್ಯವಹಾರ ವೇಳೆಯೊಳಗೆ.

**ವಿಶೇಷ ಸೂಚನೆ:–** ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆಗಳು ಉದ್ಭವಿಸಿದಲ್ಲಿ ಸಹಾಯವಾಣಿ (**Help line**) 080–30574913, 080–30574944 ಮತ್ತು 080–30574945ಗಳನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**3. ವಿಷಯ, ಸಂಕೇತಗಳು ಮತ್ತು ನಿಗದಿಪಡಿಸಿದ ಶುಲ್ಕ:** ಇಲಾಖಾ ಪರೀಕ್ಷೆಯ ವಿವಿಧ ವಿಷಯಗಳು, ಅವುಗಳ ಸಂಕೇತಗಳು ಹಾಗೂ ಸರ್ಕಾರದ ಆದೇಶ ಸಂಖ್ಯೆ. ಸಿಆಸುಇ 6 ಸೇಲೋಸೇ 2010, ದಿನಾಂಕ: **06–08–2010**ರನ್ವಯ ನಿಗದಿಪಡಿಸಿರುವ ಪರಿಷ್ಕೃತ ಶುಲ್ಕಗಳ ವಿವರಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ವಿವರಿಸಲಾಗಿದೆ.

| **ವಿಷಯ** | **ವಿಷಯ ಸಂಕೇತ** | **ನಿಗದಿಪಡಿಸಲಾದ ಶುಲ್ಕ ರೂ.** |
|---|---|---|
| (1) | (2) | (3) |
| ಅಕೌಂಟ್ಸ್ ಲೋಯರ್ | 1 | 50–00 |
| ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 | 2 | 50–00 |
| ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2 | 3 | 50–00 |
| ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ | 4 | 50–00 |

| ವಿಷಯ | ವಿಷಯ ಸಂಕೇತ | ನಿಗದಿಪಡಿಸಲಾದ ಶುಲ್ಕ ರೂ. |
|---|---|---|
| ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ | 5 | 50–00 |
| ಫಾರೆಸ್ಟ್ ಪತ್ರಿಕೆ–1 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 6 | 50–00 |
| ಫಾರೆಸ್ಟ್ ಪತ್ರಿಕೆ–2 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 7 | 50–00 |
| ಜನರಲ್ ಲಾ ಭಾಗ–2 | 8 | 50–00 |
| ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್ | 9 | 50–00 |
| ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವಲಪ್‌ಮೆಂಟ್ | 10 | 50–00 |
| ಮೋಟಾರ್ ವೆಹಿಕಲ್ಸ್ | 11 | 50–00 |
| ಮೈನಿಂಗ್ ಭಾಗ–1 | 12 | 50–00 |
| ಮೈನಿಂಗ್ ಭಾಗ–2 | 13 | 50–00 |
| ಪ್ರಿಸನ್ಸ್ | 14 | 50–00 |
| ಪೋರ್ಟ್ಸ್ ಹೈಯರ್ | 15 | 50–00 |
| ಪೋರ್ಟ್ಸ್ ಲೋಯರ್ | 16 | 50–00 |
| ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–1 | 17 | 50–00 |
| ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–2 | 18 | 50–00 |
| ಯೂಥ್ ಸರ್ವೀಸ್ ಮ್ಯಾನ್ಯುಯಲ್ | 19 | 50–00 |
| ಎಕ್ಸೈಸ್ | 20 | 50–00 |
| ಪೊಲೀಸ್ ಮ್ಯಾನ್ಯುಯಲ್ | 21 | 50–00 |
| ಅಕೌಂಟ್ಸ್ ಹೈಯರ್ | 22 | 100–00 |
| ಕಮರ್ಷಿಯಲ್ ಟ್ಯಾಕ್ಸಸ್ ಭಾಗ–2 (ಲೋಯರ್) | 23 | 100–00 |
| ಫಾರೆಸ್ಟ್ | 24 | 100–00 |
| ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್ | 25 | 100–00 |
| ಲೇಬರ್ | 26 | 100–00 |
| ಲೋಕಲ್ ಲಾಸ್ ಆಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ | 27 | 100–00 |
| ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್ | 28 | 100–00 |
| ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್ | 29 | 100–00 |
| ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1 | 30 | 100–00 |
| ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2 | 31 | 100–00 |
| ಪಿ.ಡಬ್ಲ್ಯೂ.ಡಿ. ಲೋಯರ್ | 32 | 100–00 |
| ರಿಜಿಸ್ಟ್ರೇಷನ್ | 33 | 100–00 |
| ಸಿರಿಕಲ್ಚರ್ | 34 | 100–00 |
| ಕೋ–ಆಪರೇಷನ್ | 35 | 100–00 |
| ಜನರಲ್ ಲಾ ಭಾಗ–1 | 36 | 100–00 |
| ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ | 37 | 100–00 |
| ಮಾರ್ಕೆಟಿಂಗ್ | 38 | 100–00 |
| ರೆವಿನ್ಯೂ ಹೈಯರ್ ಭಾಗ–1 | 39 | 100–00 |
| ರೆವಿನ್ಯೂ ಹೈಯರ್ ಭಾಗ–2 | 40 | 100–00 |
| ರೆವಿನ್ಯೂ ಲೋಯರ್ | 41 | 100–00 |

| ವಿಷಯ | ವಿಷಯ ಸಂಕೇತ | ನಿಗದಿಪಡಿಸಲಾದ ಶುಲ್ಕ ರೂ. |
|---|---|---|
| (1) | (2) | (3) |
| ಕಮರ್ಷಿಯಲ್ ಟ್ಯಾಕ್ಸಸ್ ಭಾಗ–1 ಹೈಯರ್ | 42 | 100–00 |
| ಕೋ–ಆಪರೇಟಿವ್ ಆಡಿಟ್ | 43 | 100–00 |
| ಇನ್ಸೂರೆನ್ಸ್ ಅಡ್ವಾನ್ಸ್‌ಡ್ | 44 | 100–00 |
| ಇನ್ಸೂರೆನ್ಸ್ ಹೈಯರ್ | 45 | 100–00 |
| ಇನ್ಸೂರೆನ್ಸ್ ಲೋಯರ್ | 46 | 100–00 |
| ಕನ್ನಡ ಭಾಷಾ ಪರೀಕ್ಷೆ | 47 | 100–00 |
| ಫುಡ್ ಅಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್ | 48 | 100–00 |
| ಕರ್ನಾಟಕ ಕನ್ಸ್ಯೂಮರ್ ಪ್ರೊಟೆಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್ | 49 | 100–00 |
| ಇಂಡಿಯನ್ ಕಾಂಟ್ರಕ್ಟ್ ಆಕ್ಟ್ | 51 | 50–00 |
| ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್ | 52 | 50–00 |
| ಕೆ.ಪಿ.ಎಸ್.ಸಿ. ರಿಕ್ರೂಟ್‌ಮೆಂಟ್ ರೂಲ್ಸ್ | 53 | 50–00 |
| ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–1 | 54 | 100–00 |
| ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–2 | 55 | 50–00 |
| ಸ್ಪೆಷಲ್ ಲಾಸ್ ಅಂಡ್ ಸರ್ವಿಸ್ ರೂಲ್ಸ್ | 56 | 50–00 |
| ಟ್ರಾನ್ಸ್‌ಲೇಷನ್ ಟೆಸ್ಟ್ | 58 | 50–00 |
| ಎಸ್.ಎ.ಎಸ್ ಭಾಗ–1 | 61 | 100–00 |
| ಎಸ್.ಎ.ಎಸ್ ಭಾಗ–2 | 62 | 100–00 |
| ಎಸ್.ಎ.ಎಸ್ ಭಾಗ–3 | 63 | 100–00 |
| ಟ್ರೆಜರಿ ಅಕೌಂಟ್ಸ್ ಭಾಗ–1 | 64 | 100–00 |
| ಟ್ರೆಜರಿ ಅಕೌಂಟ್ಸ್ ಭಾಗ–2 | 65 | 100–00 |
| ಎಲೆಕ್ಟ್ರಿಸಿಟಿ ಲಾಸ್ ಎಕ್ಸಾಮಿನೇಷನ್ | 66 | 100–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ–1 | 67 | 50–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್) ಭಾಗ–2 | 68 | 50–00 |
| ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಲೋಯರ್) ಎಕ್ಸಾಮಿನೇಷನ್ | 70 | 50–00 |
| ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್ | 71 | 50–00 |
| ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ) | 72 | 100–00 |
| ಕನ್ನಡ ಭಾಷಾ ಮೌಖಿಕ ಪರೀಕ್ಷೆ | 73 | 100–00 |

**ವಿಶೇಷ ಸೂಚನೆಗಳು:**

(1) ಕರ್ನಾಟಕ ನಾಗರಿಕ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1974ರನ್ವಯ ಸಬಾರ್ಡಿನೇಟ್ ಅಕೌಂಟ್ಸ್ ಸರ್ವಿಸ್(ಎಸ್.ಎ.ಎಸ್) ಪರೀಕ್ಷೆಗಳನ್ನು ತೆಗೆದುಕೊಳ್ಳಬೇಕಾಗುವ ನೌಕರರು ಪ್ರಥಮ ದರ್ಜೆ/ದ್ವಿತೀಯ ದರ್ಜೆ ಸಹಾಯಕರಾಗಿದ್ದಲ್ಲಿ ಅವರು ಸೇವೆಗೆ ನೇಮಕಗೊಂಡ ದಿನಾಂಕದಿಂದ ಪ್ರಥಮ ದರ್ಜೆ ಸಹಾಯಕರಾಗಿ ಮೂರು ವರ್ಷಗಳಿಗಿಂತ ಕಡಿಮೆ ಇರದ ಅಥವಾ ದ್ವಿತೀಯ ದರ್ಜೆ ಸಹಾಯಕರಾಗಿ ಆರು ವರ್ಷಗಳಿಗಿಂತ ಕಡಿಮೆ ಇರದ ಅವಧಿಯ ಸೇವೆ ಸಲ್ಲಿಸಿದ್ದು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗಿದ್ದಲ್ಲಿ ಮಾತ್ರ ಸದರಿ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹರಾಗಿರುತ್ತಾರೆ. ಅಂತಹ ಅಭ್ಯರ್ಥಿಗಳು ಅವರ ಸೇವಾ ಅವಧಿಯನ್ನು ಮತ್ತು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ನಿಗದಿತ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

(2) ಆಯೋಗದ ಆದೇಶ ಸಂಖ್ಯೆ ಇ.ಪ(2)3774/94–95/ಪಿಎಸ್‌ಸಿ ದಿನಾಂಕ 18ನೇ, ಫೆಬ್ರವರಿ 1995ರ ಮೇರೆಗೆ ಬ್ಯಾಟರಿ ಚಾಲಿತ ಪ್ರೋಗ್ರಾಮ್ ಮಾಡದೆ ಇರುವಂತಹ ಕ್ಯಾಲ್ಕುಲೇಟರ್‌ಗಳನ್ನು ಮಾತ್ರ ಎಸ್.ಎ.ಎಸ್ ಪರೀಕ್ಷೆಗಳಲ್ಲಿ ಉಪಯೋಗಿಸಲು ಅಭ್ಯರ್ಥಿಗಳಿಗೆ ಅನುಮತಿ ನೀಡಲಾಗಿದೆ.

**4. ಪರೀಕ್ಷಾ ವಿಧಾನ:–**

**(ಅ) ಇಲಾಖಾ ಪರೀಕ್ಷೆಗಳಲ್ಲಿ ಕೆಳಕಂಡ ವಿಷಯಗಳಿಗೆ ವಸ್ತುನಿಷ್ಠ ಬಹುಆಯ್ಕೆ ಮಾದರಿಯಲ್ಲಿ (OBJECTIVE TYPE MULTIPLE CHOICE) ಪರೀಕ್ಷೆ ನಡೆಸಲಾಗುವುದು.**

1. ಅಕೌಂಟ್ಸ್ ಲೋಯರ್
2. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1
3. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2
4. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್
5. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್
6. ಫಾರೆಸ್ಟ್ ಪತ್ರಿಕೆ–1
7. ಫಾರೆಸ್ಟ್ ಪತ್ರಿಕೆ–2
8. ಜನರಲ್ ಲಾ ಭಾಗ–2
9. ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್
10. ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವಲಪ್‌ಮೆಂಟ್
11. ಮೋಟಾರ್ ವೆಹಿಕಲ್ಸ್
12. ಮೈನಿಂಗ್ ಭಾಗ–1
13. ಮೈನಿಂಗ್ ಭಾಗ–2
14. ಪ್ರಿಸನ್ಸ್
15. ಪೋರ್ಟ್ಸ್ ಹೈಯರ್
16. ಪೋರ್ಟ್ಸ್ ಲೋಯರ್
17. ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–1
18. ಸೋಷಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–2
19. ಯೂಥ್ ಸರ್ವಿಸ್ ಮ್ಯಾನ್ಯುಯಲ್
20. ಎಕ್ಸೈಸ್
21. ಪೊಲೀಸ್ ಮ್ಯಾನ್ಯುಯಲ್
22. ಅಕೌಂಟ್ಸ್ ಹೈಯರ್
23. ಕಮರ್ಷಿಯಲ್ ಟ್ಯಾಕ್ಸಸ್ ಭಾಗ–2 (ಲೋಯರ್)
24. ಫಾರೆಸ್ಟ್
25. ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್
26. ಲೇಬರ್
27. ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್
28. ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–1
29. ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್
30. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1, ಪತ್ರಿಕೆ–2
31. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2
32. ಪಿ.ಡಬ್ಲ್ಯೂ.ಡಿ ಲೋಯರ್
33. ರಿಜಿಸ್ಟ್ರೇಷನ್
34. ಸಿರಿಕಲ್ಚರ್
35. ಕೋ–ಆಪರೇಷನ್
36. ಜನರಲ್ ಲಾ ಭಾಗ–1
37. ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್
38. ಮಾರ್ಕೆಟಿಂಗ್
39. ರೆವಿನ್ಯೂ ಹೈಯರ್ ಭಾಗ–1
40. ರೆವಿನ್ಯೂ ಹೈಯರ್ ಭಾಗ–2
41. ರೆವಿನ್ಯೂ ಲೋಯರ್

42. ಕಮರ್ಷಿಯಲ್ ಟ್ಯಾಕ್ಸಸ್ ಭಾಗ–1 ಹೈಯರ್
43. ಕೋ–ಆಪರೇಟಿವ್ ಆಡಿಟ್
44. ಇನ್ಸೂರೆನ್ಸ್ ಅಡ್ವಾನ್ಸಡ್
45. ಇನ್ಸೂರೆನ್ಸ್ ಹೈಯರ್, ಪತ್ರಿಕೆ–1 ಮತ್ತು 3
46. ಇನ್ಸೂರೆನ್ಸ್ ಲೋಯರ್, ಪತ್ರಿಕೆ–1 ಮತ್ತು 3
47. ಫುಡ್ ಅಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್
48. ಕರ್ನಾಟಕ ಕನ್ಸ್ಯೂಮರ್ ಪ್ರೊಟೆಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್
49. ಇಂಡಿಯನ್ ಕಾಂಟ್ರಕ್ಟ್ ಆಕ್ಟ್
50. ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್
51. ಕೆ.ಪಿ.ಎಸ್.ಸಿ. ರಿಕ್ರೂಟ್‌ಮೆಂಟ್ ರೂಲ್ಸ್
52. ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–1
53. ಸ್ಪೆಷಲ್ ಲಾಸ್ ಅಂಡ್ ಸರ್ವಿಸ್ ರೂಲ್ಸ್
54. ಎಸ್.ಎ.ಎಸ್ ಭಾಗ–1, ಪತ್ರಿಕೆ–2 ಮತ್ತು 3
55. ಎಸ್.ಎ.ಎಸ್ ಭಾಗ–2,
56. ಎಸ್.ಎ.ಎಸ್ ಭಾಗ–3
57. ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–2 ಮತ್ತು 3
58. ಟ್ರೆಜರಿ ಅಕೌಂಟ್ಸ್ ಭಾಗ–2
59. ಎಲೆಕ್ಟ್ರಿಸಿಟಿ ಲಾಸ್
60. ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ–1
61. ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಲೋಯರ್) ಎಕ್ಸಾಮಿನೇಷನ್
62. ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್.

ಪ್ರತಿ ವಿಷಯಗಳಲ್ಲಿನ ಪಠ್ಯಕ್ರಮದಲ್ಲಿರುವ (**Syllabus**) ಯಾವುದಾದರೂ ನಿಯಮಗಳು/ ಅಧಿನಿಯಮಗಳು ನಿರಸನಗೊಂಡಿದ್ದಲ್ಲಿ (**Repealed**) ಅವುಗಳನ್ನು ಕೈಬಿಟ್ಟು ಹೊಸದಾಗಿ ಸೇರ್ಪಡೆಯಾಗಿರುವ ಹಾಗೂ ಪ್ರಸಕ್ತ ಇಲಾಖೆಗಳಲ್ಲಿ ಚಾಲ್ತಿಯಲ್ಲಿರುವ ನಿಯಮ/ಅಧಿನಿಯಮಗಳನ್ವಯ ಪ್ರಶ್ನೆಪತ್ರಿಕೆಗಳನ್ನು ಸಿದ್ದಪಡಿಸಿ ಪರೀಕ್ಷೆಗಳನ್ನು ನಡೆಸಲಾಗುವುದೆಂದು ಅಭ್ಯರ್ಥಿಗಳ ಗಮನಕ್ಕೆ ತರಲಾಗಿದೆ.

ಈ ವಿಷಯಗಳಲ್ಲಿನ ಪಶ್ನೆಪತ್ರಿಕೆಗಳಲ್ಲಿ ಪ್ರತಿ ಪ್ರಶ್ನೆಗೂ ನಾಲ್ಕು ಸಂಭವನೀಯ ಉತ್ತರಗಳಿರುತ್ತವೆ. ಪ್ರತಿ ಪ್ರಶ್ನೆಗೆ ನೀಡಲಾದ ನಾಲ್ಕು ಉತ್ತರಗಳ ಪೈಕಿ ಒಂದು ಸರಿ ಉತ್ತರವನ್ನು ಆಯ್ಕೆ ಮಾಡಿ ಉತ್ತರಿಸಬೇಕಿರುತ್ತದೆ. ಪ್ರತಿ ಪ್ರಶ್ನೆಗೂ ಆಯ್ಕೆ ಮಾಡಲಾದ ಉತ್ತರವು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿರುತ್ತದೆಯೆಂದು ಅರಿತು, ತೃಪ್ತಿಹೊಂದಿದ ನಂತರವೇ ಅಭ್ಯರ್ಥಿಗಳು ನೀಲಿ ಅಥವಾ ಕಪ್ಪು ಬಣ್ಣದ ಬಾಲ್‌ಪಾಯಿಂಟ್ ಪೆನ್ನಿನಿಂದ ಎನ್‌ಕೋಡ್ (ಸಂಕೇತ ಗುರುತು) ಮಾಡಬೇಕು. ತರುವಾಯ ತಪ್ಪು ಉತ್ತರಗಳನ್ನು ಯಾವುದೇ ಸಂದರ್ಭದಲ್ಲಿ ಅಳಿಸಲು ಸಾಧ್ಯವಿರುವುದಿಲ್ಲ.

**ಮೇಲ್ಕಂಡ ವಿಷಯಗಳ ಪರೀಕ್ಷೆಯಲ್ಲಿ ನಿಗದಿಪಡಿಸಲಾದ ವಿಷಯಗಳಿಗೆ ಮಾತ್ರ ನಿಯಮದಂತೆ ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದು. ವಸ್ತುನಿಷ್ಠ ಬಹುಆಯ್ಕೆ ಮಾದರಿಯ ಪರೀಕ್ಷೆಗೆ ಓ.ಎಂ.ಆರ್. (OMR SHEET) ಯಲ್ಲಿ ಮಾತ್ರ ಉತ್ತರಿಸಬೇಕು. ಓ.ಎಂ.ಆರ್. ಉತ್ತರಹಾಳೆ ಮಾದರಿ ಪ್ರತಿಯನ್ನು ಹಾಗೂ ಅಭ್ಯರ್ಥಿಗಳಿಗೆ ನೀಡಲಾದ ಸೂಚನೆಗಳನ್ನು ಆಯೋಗದ ವೆಬ್‌ಸೈಟ್‌ನಲ್ಲಿ ನೋಡಬಹುದು.**

**(ಆ)ಈ ಕೆಳಕಂಡ ವಿಷಯಗಳಿಗೆ ವಿವರಣಾತ್ಮಕ ಮಾದರಿಯಲ್ಲಿ (Descriptive Type)ಪರೀಕ್ಷೆ ನಡೆಸಲಾಗುವುದು.**

**1.** ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ (ಹೈಯರ್)ಎಕ್ಸಾಮಿನೇಷನ್ ಭಾಗ–2,ಪತ್ರಿಕೆ–1
**2.** ಎಸ್.ಎ.ಎಸ್. ಭಾಗ–1, ಪತ್ರಿಕೆ–1
**3.** ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–1
**4.** ಇನ್ಸೂರೆನ್ಸ್ ಹೈಯರ್, ಪತ್ರಿಕೆ–2
**5.** ಇನ್ಸೂರೆನ್ಸ್ ಲೋಯರ್, ಪತ್ರಿಕೆ–2
**6.** ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–1, ಪತ್ರಿಕೆ–1
**7.** ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್ ಭಾಗ–2
**8.** ಕನ್ನಡಭಾಷೆ, ಪತ್ರಿಕೆ–1 ಮತ್ತು 2
**9.** ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ)ಪತ್ರಿಕೆ–1 ಮತ್ತು2.
**10.** ಟ್ರಾನ್ಸ್‌ಲೇಷನ್ ಟೆಸ್ಟ್
**11.** ಪ್ರೆಸ್ ಅಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–2.

ಎ) ವಿವರಣಾತ್ಮಕ ಪರೀಕ್ಷೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಸೇವಾ ಪರೀಕ್ಷೆಗಳನ್ನು ಆಂಗ್ಲಭಾಷೆಯಲ್ಲಿ ಅಥವಾ ಕನ್ನಡದಲ್ಲಿ ಉತ್ತರಿಸಲು ಅವಕಾಶವಿರುತ್ತದೆ.

ಬಿ) ಅಭ್ಯರ್ಥಿಯು ವಿವರಣಾತ್ಮಕ ಮಾದರಿಯ ಯಾವುದೇ ಒಂದು ಪತ್ರಿಕೆಯನ್ನು ಪೂರ್ಣವಾಗಿ ಆಂಗ್ಲ ಅಥವಾ ಪೂರ್ಣವಾಗಿ ಕನ್ನಡ ಮಾಧ್ಯಮದಲ್ಲಿ ಉತ್ತರಿಸತಕ್ಕದ್ದು. ಭಾಗಶಃ ಆಂಗ್ಲ ಮತ್ತು ಭಾಗಶಃ ಕನ್ನಡದಲ್ಲಿ ಉತ್ತರಿಸಿದಲ್ಲಿ ಅಂತಹ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

**5. ಸೂಚನೆಗಳು:**

(ಎ) ಕೇಂದ್ರ ಪರಿಹಾರ ಸಮಿತಿಯು ಸರ್ಕಾರದ ಸ್ವಾಮ್ಯಕ್ಕೊಳಪಟ್ಟಿರುವ ಸಂಸ್ಥೆಯಾಗಿರುವ ಕಾರಣ ಅಲ್ಲಿಯ ಸಿಬ್ಬಂದಿ ವರ್ಗದವರು ಆಯೋಗವು ನಡೆಸುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್, ಅಕೌಂಟ್ಸ್ ಲೋಯರ್, ಜನರಲ್ ಲಾ ಇತ್ಯಾದಿ ಕಡ್ಡಾಯಗೊಳಿಸಲಾದ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

(ಬಿ) ಸ್ಥಳೀಯ ಅಭ್ಯರ್ಥಿಗಳು, ಸ್ಟೈಪೆಂಡರಿ ಪದವೀಧರರು, ದೈನಿಕ ಮುಜರಾಯಿ ಮಾಸಿಕ ವೇತನದ ಮೇಲೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು, ಕರಾರು ಆಧಾರದಲ್ಲಿ ಹಾಗೂ ಅನುದಾನಿತ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಈ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗುವುದಿಲ್ಲ.

(ಸಿ) ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ ಮತ್ತು ಲೋಯರ್ ವಿಷಯಗಳ ಪರೀಕ್ಷೆಯಲ್ಲಿ "ಉದ್ಯೋಗ ಮತ್ತು ತರಬೇತಿ ಮಹಾ ನಿರ್ದೇಶನಾಲಯ ನವದೆಹಲಿ ಇವರು ಪ್ರಕಟಿಸಿರುವ **ಎಂಪ್ಲಾಯ್‌ಮೆಂಟ್ ಸರ್ವೀಸ್ ಮ್ಯಾನ್ಯುಯಲ್"** ಪುಸ್ತಕವನ್ನು ಉಪಯೋಗಿಸಲು ಅನುಮತಿ ನೀಡಲಾಗಿದೆ.

(ಡಿ) ಕಾಲಕಾಲಕ್ಕೆ/ಸರ್ಕಾರವು ಇತರ ಸರ್ಕಾರಿ ಸ್ವಾಮ್ಯದ ಪರೀಕ್ಷೆಗಳ ಸಿಬ್ಬಂದಿಗಳಿಗೆ ಇಲಾಖಾ ಪರೀಕ್ಷೆಗಳನ್ನು ನಿಗದಿಪಡಿಸಿದ ರಾಜ್ಯಪತ್ರದಲ್ಲಿ ಪ್ರಕಟಿಸಿದಲ್ಲಿ ಅಂತಹವರು ಪರೀಕ್ಷೆ ತೆಗೆದುಕೊಳ್ಳಲು ಅರ್ಹರಾಗುತ್ತಾರೆ.

**6. ಪರೀಕ್ಷಾ ಕೇಂದ್ರಗಳು:**

**(ಅ) ಇಲಾಖಾ ಪರೀಕ್ಷೆಗಳ ವಿಷಯ ಸಂಕೇತ 51 ರಿಂದ 56, 58, 61 ರಿಂದ 68 ಮತ್ತು 70 ರಿಂದ 72ರ ಪತ್ರಿಕೆಗಳ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರವೇ ನಡೆಸಲಾಗುವುದು.**

**(ಆ) ಉಳಿದಂತೆ ಇತರೆ ಪರೀಕ್ಷೆಗಳು ಈ ಕೆಳಕಂಡ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿದ್ದು, ಜಿಲ್ಲಾ ಸಂಕೇತ ಸಂಖ್ಯೆಗಳನ್ನು ಅವುಗಳ ಎದುರಿಗೆ ನೀಡಿದೆ. ಈ ಸಂಕೇತ ಸಂಖ್ಯೆಗಳನ್ನು ಅರ್ಜಿಯಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು:**

| ಜಿಲ್ಲೆ | ಸಂಕೇತ | ಜಿಲ್ಲೆ | ಸಂಕೇತ |
|---|---|---|---|
| ಬೆಂಗಳೂರು | 01 | ಕಾರವಾರ | 17 |
| ಬೆಳಗಾವಿ | 02 | ಕೋಲಾರ | 18 |
| ಬಳ್ಳಾರಿ | 03 | ಕೊಪ್ಪಳ | 19 |
| ಬೀದರ್ | 04 | ಮಂಡ್ಯ | 20 |
| ಬಿಜಾಪುರ | 05 | ಮಂಗಳೂರು | 21 |
| ಬಾಗಲಕೋಟೆ | 06 | ಮಡಿಕೇರಿ | 22 |
| ಚಾಮರಾಜನಗರ | 07 | ಮೈಸೂರು | 23 |
| ಚಿಕ್ಕಬಳ್ಳಾಪುರ | 08 | ರಾಮನಗರ | 24 |
| ಚಿಕ್ಕಮಗಳೂರು | 09 | ರಾಯಚೂರು | 25 |
| ಚಿತ್ರದುರ್ಗ | 10 | ಶಿವಮೊಗ್ಗ | 26 |
| ಧಾರವಾಡ | 11 | ತುಮಕೂರು | 27 |
| ದಾವಣಗೆರೆ | 12 | ಉಡುಪಿ | 28 |
| ಗುಲ್ಬರ್ಗಾ | 13 | ನವದೆಹಲಿ | 29 |
| ಗದಗ | 14 | ಮಸ್ಸೂರಿ | 30 |
| ಹಾಸನ | 15 | ಯಾದಗಿರಿ | 31 |
| ಹಾವೇರಿ | 16 | | |

(ಇ) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 69 ಎಸ್‌ಎಸ್‌ಆರ್ 76, ದಿನಾಂಕ 16ನೇ ಜುಲೈ 1977ರ ಅನುಸಾರವಾಗಿ ನವದೆಹಲಿಯ ಕರ್ನಾಟಕ ಭವನದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು ಆಯೋಗದಿಂದ "ಉಪನಿವಾಸ ಆಯುಕ್ತರು, ಕರ್ನಾಟಕ ಭವನದ ನಿವಾಸ ಆಯುಕ್ತರ ಕಛೇರಿ, ನವದೆಹಲಿ" ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

(ಈ) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಸಿ 83, ದಿನಾಂಕ 12ನೇ ಅಕ್ಟೋಬರ್ 1983 ಇದರ ಅನುಸಾರವಾಗಿ ಮಸ್ಸೂರಿಯಲ್ಲಿ ತರಬೇತಿ ಪಡೆಯುತ್ತಿರುವ ಕರ್ನಾಟಕ ರಾಜ್ಯದ ಐ.ಎ.ಎಸ್, ಐ.ಪಿ.ಎಸ್, ಮತ್ತು ಐ.ಎಫ್.ಎಸ್ ಪ್ರೊಬೇಷನರುಗಳಿಗೆ ಇಲಾಖಾಪರೀಕ್ಷೆಗಳನ್ನು

ಆಯೋಗವು "ಪರೀಕ್ಷೆಗಳ ನಿಯಂತ್ರಣಾಧಿಕಾರಿ, ಲಾಲ್‌ಬಹದ್ದೂರ್ ಶಾಸ್ತ್ರಿ ರಾಷ್ಟ್ರೀಯ ಪ್ರಕಾಶನ ಅಕಾಡೆಮಿ, ಮಸ್ಸೂರಿ" ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**ಪರೀಕ್ಷಾ ಕೇಂದ್ರದ ಆಯ್ಕೆ.**

**(ಉ)** ಪ್ರತಿಯೊಬ್ಬ ಅಭ್ಯರ್ಥಿಯು ಪ್ರಸ್ತುತ ಆತನು **ಕರ್ತವ್ಯ ನಿರ್ವಹಿಸುತ್ತಿರುವ ಜಿಲ್ಲಾ ಕೇಂದ್ರವನ್ನೇ ಪರೀಕ್ಷಾ ಕೇಂದ್ರವನ್ನಾಗಿ ಆಯ್ಕೆ ಮಾಡಿಕೊಳ್ಳತಕ್ಕದ್ದು.** ಆದರೆ, ಯಾವುದೇ ಒಬ್ಬ ಅಭ್ಯರ್ಥಿಯು ಅನಂತರ ಇತರ ಜಿಲ್ಲೆಗೆ ವರ್ಗಾವಣೆಯಾದಲ್ಲಿ ಅಥವಾ ಅವನು ತನ್ನ ಕೇಂದ್ರ ಕಾರ್ಯಸ್ಥಾನದ ಹೊರಗೆ ಗಳಿಕೆ ರಜೆಯ ಮೇಲಿರುವುದು ಮುಂತಾದ ನಿರ್ದಿಷ್ಟ, ವಿಶೇಷ ಕಾರಣಗಳಿದ್ದಲ್ಲಿ ಅಂತಹ ಅಭ್ಯರ್ಥಿಗಳು ಈ ಬಗ್ಗೆ ಲಿಖಿತ ರೂಪದಲ್ಲಿ ಆಯೋಗದ ಗಮನಕ್ಕೆ ತರತಕ್ಕದ್ದು, ಹಾಗೂ ಸಂಬಂಧಿಸಿದ ಮಾಹಿತಿ/ದಾಖಲೆಗಳನ್ನು ಒದಗಿಸತಕ್ಕದ್ದು. ಆಯೋಗವು ಅಂತಹ ಅಭ್ಯರ್ಥಿಗಳಿಗೆ ಬೇರೆ ಕೇಂದ್ರಗಳಲ್ಲಿ ಪರೀಕ್ಷೆಗೆ ಹಾಜರಾಗುವುದಕ್ಕೆ ಕ್ರಮ ತೆಗೆದುಕೊಳ್ಳಲಾಗುವುದು. ಆದಾಗ್ಯೂ ಆಯೋಗದ ನಿರ್ದಿಷ್ಟ ಅನುಮತಿ ಇಲ್ಲದೆ ತಾವು ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಕೇಂದ್ರವನ್ನು ಬಿಟ್ಟು ಬೇರೆ ಜಿಲ್ಲಾ ಕೇಂದ್ರದಲ್ಲಿ ಪರೀಕ್ಷೆಯನ್ನು ತೆಗೆದುಕೊಳ್ಳುವಂತಿಲ್ಲ. ಆ ರೀತಿ ಮಾಡಿದ ಅಭ್ಯರ್ಥಿಗಳು ಆಯೋಗ ತೆಗೆದುಕೊಳ್ಳುವ ಶಿಸ್ತು ಕ್ರಮಕ್ಕೆ ಹೊಣೆಯಾಗುವರು.

**(ಊ) ಪರೀಕ್ಷಾ ಕೇಂದ್ರದ ಬದಲಾವಣೆ:**

ಪರೀಕ್ಷಾ ಕೇಂದ್ರದ ಬದಲಾವಣೆಗೆ ಸಲ್ಲಿಸುವ ಕೋರಿಕೆಗಳನ್ನು ದಿನಾಂಕ:**20–07–2013**ರ ಒಳಗಾಗಿ ಸಲ್ಲಿಸತಕ್ಕದ್ದು. ಈ ದಿನಾಂಕದ ತರುವಾಯ ಸಲ್ಲಿಸಲ್ಪಡುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಲ್ಲದೆ ನಿಗದಿತ ದಿನಾಂಕದ ಒಳಗೆ ಸಲ್ಲಿಸುವ ಮನವಿಗಳನ್ನು ಕೇಂದ್ರ ಬದಲಾವಣೆಗೆ ಅನುಮತಿಸುವುದು/ನಿರಾಕರಿಸುವುದು ಆಯೋಗದ ವಿವೇಚನೆಗೆ ಒಳಪಟ್ಟಿದೆ ಎಂಬ ಅಂಶವನ್ನು ಗಮನಿಸತಕ್ಕದ್ದು. ಅಧಿಕೃತ ಕಾರಣಗಳ ಮೇಲೆ ಕೇಂದ್ರ ಬದಲಾವಣೆಗೆ ಅರ್ಜಿ ಸಲ್ಲಿಸುವ ನೌಕರರು ವರ್ಗಾವಣೆಯ ಅಥವಾ ಸ್ಥಳ ನಿಯುಕ್ತಿಯ ಆದೇಶಗಳ ದೃಢೀಕೃತ ನಕಲನ್ನು ಅಥವಾ ಸಂದರ್ಭಾನುಸಾರ ಯಾವುದೇ ಅಧಿಕೃತ ರಜೆ ಮಂಜೂರು ಮಾಡಲಾದ ಅಧಿಕೃತಜ್ಞಾಪನ ಪತ್ರದ ದೃಢೀಕೃತ ನಕಲಿನೊಂದಿಗೆ ಆ ಬಗ್ಗೆ ಪಡೆದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಸ್ವವಿಳಾಸ ಬರೆದ ಹಾಗೂ ಅವಶ್ಯಕ ಅಂಚೆಚೀಟಿ ಹಚ್ಚಲಾದ ಲಕೋಟೆಯನ್ನು ಪತ್ರ ವ್ಯವಹಾರಕ್ಕಾಗಿ ಲಗತ್ತಿಸತಕ್ಕದ್ದು. (ರಿಜಿಸ್ಟರ್ಡ್ ಅಂಚೆಯಲ್ಲಿ ಕಳುಹಿಸಬೇಕಾದರೆ ಅದಕ್ಕೆ ತಗಲುವ ಸಾಕಷ್ಟು ಅಂಚೆಚೀಟಿ ಅಂಟಿಸಿರಬೇಕು). ಆಯೋಗದಿಂದ ನಿರ್ದಿಷ್ಟ ಅನುಮತಿ ಪಡೆಯದೆ ಯಾವುದೇ ಕಾರಣಕ್ಕೂ ಬೇರೆ ಜಿಲ್ಲಾ ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ಬರೆಯುವಂತಿಲ್ಲ

**7. (ಅ) ವಿನಾಯಿತಿಯ ವಿವರ ಹಾಗೂ ಈ ವಿವರಗಳನ್ನು ಅರ್ಜಿಗಳಲ್ಲಿ ನಮೂದಿಸುವ ಬಗ್ಗೆ:**

ಯಾವುದೇ ಪರೀಕ್ಷೆಯು ಒಂದಕ್ಕಿಂತ ಹೆಚ್ಚು ಪತ್ರಿಕೆಗಳನ್ನೊಳಗೊಂಡಿದ್ದು ಅಭ್ಯರ್ಥಿಯು ಆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೂ ಅದೇ ವಿಷಯದ ಯಾವುದಾದರೂ ಪತ್ರಿಕೆಗಳಲ್ಲಿ ಆ ಪತ್ರಿಕೆಗೆ ನಿರ್ದಿಷ್ಟಪಡಿಸಲಾದ ಗರಿಷ್ಠ ಅಂಕಗಳಲ್ಲಿ ಶೇಕಡಾ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದಿದ್ದಲ್ಲಿ ಅಂತಹವರನ್ನು ಆ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿರುವರೆಂದು ಪರಿಗಣಿಸಲಾಗುವುದು. ಅಂತಹವರು ನಿಯಮಾನುಸಾರ ಪರೀಕ್ಷೆಗಳ ಫಲಿತಾಂಶ ಘೋಷಿಸಿದ ದಿನಾಂಕದಿಂದ ಎರಡು ವರ್ಷಗಳೊಳಗೆ ಆ ಪರೀಕ್ಷೆಯ ಉಳಿದ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಅವಶ್ಯವಿರುವಷ್ಟು ಅಂಕಗಳನ್ನು ಪಡೆದು ತೇರ್ಗಡೆಯಾಗತಕ್ಕದ್ದು. ಇಲ್ಲದಿದ್ದಲ್ಲಿ ಅಂತಹ ವಿನಾಯ್ತಿಯು ರದ್ದಾಗುವುದು.

ಈ ರೀತಿ ಶೇಕಡ 60ಕ್ಕಿಂತ ಹೆಚ್ಚು ಅಂಕಗಳನ್ನು ಪಡೆದು ವಿನಾಯಿತಿ ಹೊಂದಿರುವಂತಹ ಅಭ್ಯರ್ಥಿಗಳು ಅವರು ವಿನಾಯಿತಿ ಪಡೆದ ವಿಷಯ, ವಿಷಯಸಂಕೇತ, ಪತ್ರಿಕೆ, ನೋಂದಣಿ ಸಂಖ್ಯೆ, ಅಧಿವೇಶನ ಮತ್ತು ಪರೀಕ್ಷಾಕೇಂದ್ರ ಇತ್ಯಾದಿ ವಿವರಗಳನ್ನು ಆನ್‌ಲೈನ್ ಅರ್ಜಿಯಲ್ಲಿ ನಿಗದಿಪಡಿಸಿದ ಅಂಕಣದಲ್ಲಿ ನಿರ್ದಿಷ್ಟವಾಗಿ ನಮೂದಿಸಬೇಕು. ಇಲ್ಲವಾದಲ್ಲಿ ಫಲಿತಾಂಶವನ್ನು ಸಿದ್ಧಪಡಿಸುವಾಗ ಹಿಂದೆ ಪಡೆದ ವಿನಾಯಿತಿಯನ್ನು ಪರಿಗಣಿಸಲಾಗುವುದಿಲ್ಲ.

ಕನ್ನಡಭಾಷಾ ಪರೀಕ್ಷೆ ಪತ್ರಿಕೆ–1 ಮತ್ತು ಪತ್ರಿಕೆ–2 ರಲ್ಲಿ ವಿನಾಯಿತಿ ಪಡೆದಿದ್ದಲ್ಲಿ ಮೌಖಿಕ ಸಂದರ್ಶನಕ್ಕೆ ಹಾಜರಾಗಲು, ಸದರಿ ಅಧಿವೇಶನಕ್ಕೆ ಅರ್ಜಿ ಸಲ್ಲಿಸಿ ವಿನಾಯಿತಿ ಪಡೆದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸಬೇಕು. ಹಾಗೂ ನಿಗದಿತ ಪರೀಕ್ಷಾ ಶುಲ್ಕ ರೂ. **100/–**ಗಳನ್ನು ಪಾವತಿಸಬೇಕು ಇಲ್ಲದಿದ್ದಲ್ಲಿ ವಿನಾಯಿತಿಯನ್ನು ಪರಿಗಣಿಸುವುದಿಲ್ಲ.

**(ಆ) ವಿದ್ಯಾರ್ಹತೆಗೆ ಸಂಬಂಧ ಪಟ್ಟಂತೆ ನೀಡಲಾಗುವ ವಿನಾಯಿತಿ:**

ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದ ಎಲ್.ಎಲ್.ಬಿ ಅಥವಾ ಬಿ.ಎಲ್.,ಬಿ.ಕಾಂ/ಬಿ.ಬಿ.ಎಂ/ ಐ.ಕಾಂ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪದವಿ ಹೊಂದಿದವರು ಕೆಳಕಂಡ ವಿಷಯದ ಪತ್ರಿಕೆಗಳಲ್ಲಿ ವಿನಾಯಿತಿ ಕೋರಬಹುದು.

| ಕ್ರ.ಸಂ. | ಪದವಿ | ವಿನಾಯಿತಿ ಇರುವ ವಿಷಯ ಹಾಗೂ ಪತ್ರಿಕೆ |
|---|---|---|
| 1 | ಎಲ್.ಎಲ್.ಬಿ ಅಥವಾ ಬಿ.ಎಲ್ | ಜನರಲ್ ಲಾ ಭಾಗ–1 ಪತ್ರಿಕೆ–1 |
| 2 | ಫೈನಾನ್ಷಿಯಲ್ ಅಕೌಂಟೆನ್ಸಿ ಅಥವಾ ಅಡ್ವಾನ್ಸ್‌ಡ್ ಅಕೌಂಟೆನ್ಸಿ ವಿಷಯವನ್ನು ಒಳಗೊಂಡಿರುವ ಬಿ.ಕಾಂ/ಬಿ.ಬಿ.ಎಂ/ಐ.ಕಾಂ. ಅಥವಾ ತತ್ಸಮಾನ ಪದವಿ. | ಅ) ಕಮರ್ಷಿಯಲ್ ಟ್ಯಾಕ್ಸ್ ಹೈಯರ್ ಪತ್ರಿಕೆ–3<br>ಆ) ಕೋ–ಆಪರೇಷನ್ ಪತ್ರಿಕೆ–2<br>ಇ) ಕೋ–ಆಪರೇಟಿವ್ ಆಡಿಟ್ ಪತ್ರಿಕೆ–2<br>ಈ) ಎಸ್.ಎ.ಎಸ್. ಭಾಗ–3 ಪತ್ರಿಕೆ–1<br>ಉ) ಟ್ರೆಜರಿ ಅಕೌಂಟ್ಸ್ ಭಾಗ–2 ಪತ್ರಿಕೆ–1 |

ಆನ್‌ಲೈನ್ ಅರ್ಜಿಯಲ್ಲಿನ ವಿನಾಯಿತಿಗೆ ಸಂಬಂಧಿಸಿದ ಅಂಕಣದಲ್ಲಿ ಅಭ್ಯರ್ಥಿಯು ಪಡೆದಿರುವ ಪದವಿಯ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು, ತಪ್ಪಿದಲ್ಲಿ ಅಂತಹ ವಿನಾಯಿತಿಯನ್ನು ಪರಿಗಣಿಸಲಾಗುವುದಿಲ್ಲ.

ವಿನಾಯಿತಿ ಕೋರಿರುವ ಅಭ್ಯರ್ಥಿಗಳು ತತ್ಸಂಬಂಧ ವಿಷಯಗಳನ್ನು ಅಭ್ಯಸಿಸಿರುವ ಬಗ್ಗೆ ಎಲ್.ಎಲ್.ಬಿ./ಬಿ.ಕಾಂ/ಬಿ.ಬಿ.ಎಂ. ಅಥವಾ ತತ್ಸಮಾನ ಪದವಿಯ ದೃಢೀಕೃತ ಅಂಕಪಟ್ಟಿ ಮತ್ತು ಪದವಿ ಪ್ರಮಾಣಪತ್ರಗಳನ್ನು ಆಯೋಗದ ಕಛೇರಿಗೆ ಆನ್‌ಲೈನ್ ಮೂಲಕ ಸಲ್ಲಿಸಿದ ಅರ್ಜಿಯ ಪ್ರತಿಯೊಂದಿಗೆ ಮರುದಿನವೇ ರಿಜಿಸ್ಟರ್ಡ್ ಅಂಚೆ ಮೂಲಕ ರವಾನಿಸತಕ್ಕದ್ದು.

**ವಿಶೇಷ ಸೂಚನೆ::–** ಕಾನೂನು ಪದವಿಯನ್ನು ಹೊಂದಿರುವ ಅಭ್ಯರ್ಥಿಗಳಿಗೆ ಜನರಲ್ ಲಾ ಭಾಗ–2 ವಿಷಯದ ಪರೀಕ್ಷೆಯನ್ನು ಬರೆಯುವುದರಿಂದ ಪೂರ್ಣ ವಿನಾಯಿತಿ ಇದ್ದು, ಸದರಿ ಅಭ್ಯರ್ಥಿಗಳು ಈ ವಿಷಯಕ್ಕೆ ಸಂಬಂಧಿಸಿದಂತೆ ಅರ್ಜಿ ಸಲ್ಲಿಸುವ ಅಗತ್ಯವಿರುವುದಿಲ್ಲ. ಬದಲಾಗಿ ಅಭ್ಯರ್ಥಿಗಳು ಸಂಬಂಧಿತ ಅಂಕಪಟ್ಟಿ/ ದಾಖಲೆಗಳನ್ನು ತಮ್ಮ ಇಲಾಖಾ ಮುಖ್ಯಸ್ಥರಿಗೆ ಸಲ್ಲಿಸಿ ಅವರಿಂದಲೇ ವಿನಾಯಿತಿ ಪಡೆಯಬಹುದಾಗಿರುತ್ತದೆ.

**8. ಕನ್ನಡಭಾಷಾ ಲಿಖಿತ ಪರೀಕ್ಷೆಗೆ ಮೌಖಿಕ ಪರೀಕ್ಷೆ:**

(1) ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಮೌಖಿಕ ಪರೀಕ್ಷೆಯನ್ನು ಆಯೋಗದ ಕೇಂದ್ರ ಕಛೇರಿ, ಉದ್ಯೋಗ ಸೌಧ, ಬೆಂಗಳೂರು–560001, ಇಲ್ಲಿ ಹಾಗೂ ಆಯೋಗದ ಪ್ರಾಂತೀಯ ಕಛೇರಿಗಳಿರುವ ಬೆಳಗಾಂ, ಗುಲ್ಬರ್ಗಾ, ಮೈಸೂರು ಹಾಗೂ ಶಿವಮೊಗ್ಗ ಕೇಂದ್ರಗಳಲ್ಲಿ ನಡೆಸಲಾಗುವುದು. ಆಯೋಗದ ವಿವೇಚನೆಯಂತೆ ಅನಿವಾರ್ಯ ಸಂದರ್ಭಗಳಲ್ಲಿ ರಾಜ್ಯದ ಇತರ ಜಿಲ್ಲಾ ಕೇಂದ್ರಗಳಲ್ಲಿ ಮೌಖಿಕ ಪರೀಕ್ಷೆಯನ್ನು ನಡೆಸಲಾಗುವುದು.

**ಸೂಚನೆ:** ಯಾವುದೇ ಸರ್ಕಾರಿ ನೌಕರನು/ನೌಕರಳು ಕನ್ನಡಭಾಷಾ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಕನ್ನಡ ಮೌಖಿಕ ಪರೀಕ್ಷೆಗೆ ಅರ್ಹರಾಗುವುದಿಲ್ಲ.

**ಆದರೆ**

**(1)** ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 81 ಎಸ್‌ಎಸ್‌ಆರ್ 81, ದಿನಾಂಕ 6ನೇ ಜೂನ್ 1981ರ ಮೇರೆಗೆ ಗೃಹರಕ್ಷಕ ಸಂಸ್ಥೆಯ ಸೈನಿಕರು ಕನ್ನಡ ಭಾಷಾ, ಮೌಖಿಕ ಪರೀಕ್ಷೆಯಲ್ಲಿ ಮಾತ್ರ ತೇರ್ಗಡೆಯಾಗತಕ್ಕದ್ದು. ವೇತನ ಮುಂಬಡ್ತಿ ಪಡೆಯುವ ಮತ್ತು ಸೇವಾ ಸ್ಥಿರೀಕರಣದ ಉದ್ದೇಶಗಳಿಗೆ ಕನ್ನಡ ಭಾಷಾ ಲಿಖಿತ ಪರೀಕ್ಷೆಯ ಬದಲಾಗಿ ಗರಿಷ್ಠ 50 ಅಂಕಗಳನ್ನು ನಿಗದಿಪಡಿಸಿರುವ ಕನ್ನಡ ಮೌಖಿಕ ಪರೀಕ್ಷೆಯಲ್ಲಿ ಮಾತ್ರ ಅವರು ತೇರ್ಗಡೆ ಹೊಂದಬೇಕಾಗಿರುತ್ತದೆ.

**(2)** ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಆರ್ 82, ದಿನಾಂಕ 30ನೇ ಆಗಸ್ಟ್ 1982ರ ಮೇರೆಗೆ ಅಂಧರಾಗಿರುವ ಮತ್ತು ಕೆಲಸಕ್ಕೆ ಓದುವುದು ಮತ್ತು ಬರೆಯುವುದು ಅವಶ್ಯವಿಲ್ಲದ ಸರ್ಕಾರಿ ನೌಕರರಿಗೆ ಸ್ಥಿರೀಕರಣದ ಮತ್ತು ವಾರ್ಷಿಕ ವೇತನ ಮುಂಬಡ್ತಿಗಳನ್ನು ಪಡೆಯುವ ಉದ್ದೇಶಗಳಿಗಾಗಿ ಕನ್ನಡ ಭಾಷಾ ಲಿಖಿತ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ–ಯಾಗುವುದರಿಂದ ವಿನಾಯಿತಿಸಲಾಗಿದೆ. ಆದರೆ ಅವರು ಕನ್ನಡ ಭಾಷಾ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು.

**(3)** ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 26 ಸೆಸೇನಿ 94, ಬೆಂಗಳೂರು, ದಿನಾಂಕ:14–07–1994ರಲ್ಲಿ ಸೂಚಿಸಿರುವ ಕಂಪೋಜಿಟರ್, ಸೀನಿಯರ್ ಕಂಪೋಜಿಟರ್, ಸೀನಿಯರ್ ಮಷಿನ್ ಮೈಂಡರ್, ಸೀನಿಯರ್ ಬೈಂಡರ್, ಸಹಾಯಕ ಪ್ರೊಸೆಸ್ ಅಪರೇಟರ್, ಆಫ್‌ಸೆಟ್ ಪ್ರಿಂಟರ್, ಆಫ್‌ಸೆಟ್ ಪ್ಲೇಟ್ ಮೇಕರ್ ಹಾಗೂ ವೈರ್‌ಮನ್ ಈ ಪದನಾಮವನ್ನು ಹೊಂದಿರುವಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ಸಿಬ್ಬಂದಿ ವರ್ಗದವರು ಮುಂಬಡ್ತಿ ಪಡೆಯಲು ಕನ್ನಡಭಾಷಾ ಪರೀಕ್ಷೆಯ ಲಿಖಿತ ಪರೀಕ್ಷೆ (ಪೇಪರ್ 1 ಮತ್ತು 2) ಯಿಂದ ವಿನಾಯಿತಿ ಹೊಂದಿರುತ್ತಾರೆ. ಆದರೆ ಮೌಖಿಕ ಪರೀಕ್ಷೆಯಲ್ಲಿ ಶೇಕಡ 40ರಷ್ಟು ಅಂಕಗಳನ್ನು ಪಡೆದು ತೇರ್ಗಡೆ ಹೊಂದಬೇಕಾಗಿರುತ್ತದೆ.

**(4) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987ರ** ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್‌ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿ ನೀಡಲಾಗಿದೆ.

**9. ಕನ್ನಡ ಭಾಷಾ ಪಠ್ಯ ಕ್ರಮ:**

ಅಖಿಲ ಭಾರತ ಸೇವಾ ಅಧಿಕಾರಿಗಳಿಗೆ ಕನ್ನಡಭಾಷಾ ವಿಷಯದ (ಸಂಕೇತ–72) ಇಲಾಖಾ ಪರೀಕ್ಷೆಯ ಅಭ್ಯರ್ಥಿಗಳಿಗೆ ಸರ್ಕಾರವು ತನ್ನ ಆದೇಶ ಸಂಖ್ಯೆ:ಡಿಪಿಎಆರ್168 ಎಸ್‌ಎಂಇ 94, ದಿನಾಂಕ:12–07–1995ರ ಪ್ರಕಾರ 10ನೇ ತರಗತಿಯ ಕನ್ನಡ ದ್ವಿತೀಯ ಹಾಗೂ ತೃತೀಯ ಭಾಷಾಪುಸ್ತಕ **"ತಿಳಿಗನ್ನಡ–6"** ಎಂಬ ಪುಸ್ತಕವನ್ನು ನಿಗದಿ ಪಡಿಸಲಾಗಿದೆ.

ಅಖಿಲ ಭಾರತ ಸೇವಾ ಅಧಿಕಾರಿಗಳನ್ನು ಹೊರತು ಪಡಿಸಿ ಕನ್ನಡ ಭಾಷಾ ವಿಷಯದ(ಸಂಕೇತ–47) ಇಲಾಖಾ ಪರೀಕ್ಷೆ ಇತರ ಅಭ್ಯರ್ಥಿಗಳಿಗೆ:

(ಅ) ಕರ್ನಾಟಕ ವಯಸ್ಕರ ಶಿಕ್ಷಣ ಸಮಿತಿ ಇವರಿಂದ ಪ್ರಕಾಶನಗೊಂಡಿರುವ ವಿವಿಧ ಲೇಖಕರಿಂದ ರಚಿತವಾದ **"ಸತ್ಯಕ್ಕೆ ಬೆಲೆಕೊಟ್ಟ ಗೆಳೆಯರು"** ಪಾಠದಿಂದ ಪ್ರಾರಂಭಗೊಳ್ಳುವ **"ಸಣ್ಣ ಕಥೆಗಳು"**

**ಮತ್ತು**

(ಆ) ಆರನೆಯ ತರಗತಿಯ ಪಠ್ಯ ಪುಸ್ತಕವಾದ **"ಕನ್ನಡ ಕಸ್ತೂರಿ"**ಯನ್ನು ನಿಗದಿಪಡಿಸಲಾಗಿದೆ.

**10. ಪ್ರವೇಶ ಪತ್ರ:**

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸಲ್ಲಿಸುತ್ತಿರುವುದರಿಂದ ಪ್ರವೇಶಪತ್ರಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.**

ವೇಳಾ ಪಟ್ಟಿಯನ್ನೊಳಗೊಂಡ ಪ್ರವೇಶಪತ್ರವನ್ನು ಪರೀಕ್ಷೆಗೆ ಮೊದಲು ಆಯೋಗದ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗುತ್ತದೆ. ಅಭ್ಯರ್ಥಿಗಳು ಪ್ರವೇಶಪತ್ರಗಳನ್ನು **Down load** ಮಾಡಿಕೊಂಡು ಮೇಲಧಿಕಾರಿಗಳ ದೃಢೀಕರಣದೊಂದಿಗೆ ನಿಗದಿತ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷಾವೇಳೆಯಲ್ಲಿ ಪ್ರವೇಶಪತ್ರವನ್ನು ಹಾಜರುಪಡಿಸತಕ್ಕದ್ದು. ಸದರಿ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳು ಜೋಪಾನವಾಗಿಟ್ಟುಕೊಂಡಿರಬೇಕು ಮತ್ತು ಅವುಗಳನ್ನು ತಮ್ಮ ಸೇವಾ ದಾಖಲೆಗಳಲ್ಲಿ ನಮೂದು ಮಾಡುವುದಕ್ಕಾಗಿ ಆಯೋಗದಿಂದ ನೀಡಲಾದ ತೇರ್ಗಡೆ ಪ್ರಮಾಣ ಪತ್ರದೊಂದಿಗೆ ಸಕ್ಷಮ ಪ್ರಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಯಾವುದೇ ಸಂದರ್ಭದಲ್ಲಿ ಪರೀಕ್ಷೆಗಳು ಮುಗಿದ ನಂತರ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದಿಲ್ಲ.

**ಸೂಚನೆ:**–ಆಯೋಗದ ವೆಬ್‌ಸೈಟ್‌ನಿಂದ Down load ಮಾಡಿಕೊಂಡ ಪ್ರವೇಶಪತ್ರದಲ್ಲಿ ಹೆಸರು, ಪದನಾಮ, ವಿಳಾಸ ಇತ್ಯಾದಿ ವಿವರಗಳು ತಪ್ಪಾಗಿ ಕಂಡುಬಂದಲ್ಲಿ ತಕ್ಷಣ ಅವುಗಳನ್ನು ತಿದ್ದುಪಡಿ ಮಾಡುವಂತೆ ಕೋರಿ ಪ್ರವೇಶಪತ್ರದ ಜೆರಾಕ್ಸ್ ಪ್ರತಿಯೊಂದಿಗೆ ತಿದ್ದುಪಡಿಗೆ ಅಗತ್ಯವಿರುವ ದಾಖಲೆ/ಮಾಹಿತಿಗಳನ್ನು ಮೇಲಧಿಕಾರಿಗಳಿಂದ ದೃಢೀಕರಿಸಿ ಆಯೋಗಕ್ಕೆ ಮನವಿಯನ್ನು ಸಲ್ಲಿಸಿದಲ್ಲಿ ಪ್ರಮಾಣಪತ್ರವನ್ನು ಮುದ್ರಿಸುವ ಮುನ್ನ ತಿದ್ದುಪಡಿಗಳನ್ನು ಅಳವಡಿಸಿಕೊಂಡು ಪ್ರಮಾಣಪತ್ರವನ್ನು ಒದಗಿಸಲಾಗುವುದು.

**11. ಪಠ್ಯಪುಸ್ತಕಗಳು:**

ಪಠ್ಯಪುಸ್ತಕಗಳನ್ನು ಉಪಯೋಗಿಸಿ ಪರೀಕ್ಷೆ ಬರೆಯಬಹುದಾದ ಪತ್ರಿಕೆಗಳಿಗೆ ಅಭ್ಯರ್ಥಿಗಳು ಸರ್ಕಾರದಿಂದ ಪ್ರಕಾಶಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಖಾಸಗಿ ಪ್ರಕಾಶಕರಿಂದ ಪ್ರಕಾಶಿಸಲ್ಪಟ್ಟ ಪುಸ್ತಕಗಳನ್ನು ಸರ್ಕಾರಿ ಪ್ರಕಾಶಿತ ಪುಸ್ತಕಗಳ ಮಾದರಿಗೆ ಯಾವುದೇ ರೀತಿಯ ತದ್ವಿರುದ್ಧವಾಗಿಲ್ಲದಿದ್ದರೆ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ 3ನೇ ಡಿಸೆಂಬರ್ 1991ರ ಆದೇಶಕ್ಕೆ ಅನುಗುಣವಾಗಿದ್ದರೆ ಅಂತಹ ಪಠ್ಯ ಪುಸ್ತಕಗಳನ್ನು ಮಾತ್ರ ಪರೀಕ್ಷಾ ಕೇಂದ್ರಗಳಲ್ಲಿ ಉಪಯೋಗಿಸಬಹುದಾಗಿರುತ್ತದೆ. ಇತರೇ ಯಾವುದೇ ಖಾಸಗಿ ಪ್ರಕಾಶಕರು ಸಿದ್ಧಪಡಿಸಿದ ಗೈಡ್‌ಗಳನ್ನು ನಿಷೇಧಿಸಲಾಗಿದೆ.

**12. ತೇರ್ಗಡೆಗೆ ಗಳಿಸಬೇಕಾದ ಅಂಕಗಳು:**

ಎ) ಯಾವುದೇ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಒಂದು ಪತ್ರಿಕೆಯನ್ನು ಒಳಗೊಂಡ ವಿಷಯವಾಗಿದ್ದಲ್ಲಿ ಸದರಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು. ಒಂದಕ್ಕಿಂತ ಹೆಚ್ಚು ಪತ್ರಿಕೆಗಳಿದ್ದಲ್ಲಿ ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡಾ 35 ಮತ್ತು ಒಟ್ಟು ಎಲ್ಲಾ ಪತ್ರಿಕೆಗಳಿಂದ ಕನಿಷ್ಠ ಶೇಕಡಾ 40 ಅಂಕಗಳನ್ನು ಪಡೆದಿರಬೇಕು. ವಿನಾಯಿತಿ ಕೋರಿದ ಬಿ.ಕಾಂ., ಬಿ.ಬಿ.ಎಂ., ಹಾಗೂ ಕಾನೂನು ಪದವೀಧರರು, ಹಾಜರಾಗುವ ವಿಷಯದ ಪ್ರತಿ ಪತ್ರಿಕೆಗಳಲ್ಲಿ ಕನಿಷ್ಠ ಶೇಕಡ 35 ಅಂಕಗಳನ್ನು ಹಾಗೂ ಪ್ರತಿ ವಿಷಯದ ಎಲ್ಲಾ ಪತ್ರಿಕೆಗಳ ಸರಾಸರಿ 40 ಅಂಕಗಳನ್ನು ಗಳಿಸಿರಬೇಕು.

ಬಿ) ಯಾವುದೇ ಪರೀಕ್ಷೆಯಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ಶೇಕಡ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದು ಉತ್ತೀರ್ಣರಾದಂತಹ ಅಭ್ಯರ್ಥಿಗಳನ್ನು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿರುವುದಾಗಿ ಫಲಿತಾಂಶ ಘೋಷಿಸಲಾಗುವುದು.

**13. ಹಾಜರಿ ಪ್ರಮಾಣ ಪತ್ರಗಳು:**

ಪರೀಕ್ಷೆಗೆ ಹಾಜರಾದ ಬಗ್ಗೆ ಹಾಜರಾತಿ ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಪರೀಕ್ಷಾಕೇಂದ್ರದ ಮೇಲ್ವಿಚಾರಕರಿಂದ ಅದನ್ನು ಪರೀಕ್ಷಾ ದಿನದಂದೇ ಪಡೆಯತಕ್ಕದ್ದು. ಹಾಜರಿ ಪ್ರಮಾಣಪತ್ರವನ್ನು ಆಯೋಗದ ಕಛೇರಿಯಿಂದ ಯಾವುದೇ ಸಂದರ್ಭದಲ್ಲೂ ನೀಡಲಾಗುವುದಿಲ್ಲ.

**14. ತೇರ್ಗಡೆ ಪ್ರಮಾಣ ಪತ್ರಗಳು:**

ಪ್ರತಿಯೊಂದು ವಿಷಯಕ್ಕೆ ತೇರ್ಗಡೆ ಪ್ರಮಾಣಪತ್ರವನ್ನು ಆಯೋಗದಿಂದ ಫಲಿತಾಂಶವು ಅಧಿಕೃತವಾಗಿ ರಾಜ್ಯಪತ್ರದಲ್ಲಿ ಪ್ರಕಟವಾದ ನಂತರ ಅಭ್ಯರ್ಥಿಗಳಿಗೆ ಕಳುಹಿಸಲಾಗುವುದು. ಪ್ರಮಾಣ ಪತ್ರದಲ್ಲಿ ಮುದ್ರಿತವಾದ ಹೆಸರು ಅಥವಾ ಇನ್ನಾವುದೇ ರೀತಿಯ ತಪ್ಪುಗಳು ಕಂಡುಬಂದಲ್ಲಿ ಅಭ್ಯರ್ಥಿಗಳು ಕೂಡಲೇ ತಿದ್ದುಪಡಿಗಾಗಿ ಸೂಕ್ತ ದಾಖಲೆಗಳೊಂದಿಗೆ ಆಯೋಗದ ಕಛೇರಿಯನ್ನು ಸಂಪರ್ಕಿಸುವುದು.

ಇಲಾಖಾ ಪರೀಕ್ಷೆಯ ಎಲ್ಲಾ ಅಭ್ಯರ್ಥಿಗಳ ಅಂಕಗಳನ್ನು ಆಯೋಗದ ವೆಬ್‌ಸೈಟ್ http://kpsc.kar.nic.in ನಲ್ಲಿ ಫಲಿತಾಂಶ ಪ್ರಕಟವಾದ ದಿನಾಂಕದಂದೇ ಪ್ರಕಟಿಸಲಾಗುವುದು ಪ್ರತ್ಯೇಕವಾಗಿ ಅಂಕಪಟ್ಟಿಗಳನ್ನು ನೀಡಲಾಗುವುದಿಲ್ಲ.

**15. ಅಂಕಗಳ ಮರು ಎಣಿಕೆ:**

(ಎ) ಯಾವುದೇ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಅಭ್ಯರ್ಥಿಯು ಫಲಿತಾಂಶ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸದರಿ ಪರೀಕ್ಷೆಯ ಎಲ್ಲಾ ಪತ್ರಿಕೆಗಳ ಅಥವಾ ಯಾವುದೇ ಪತ್ರಿಕೆಯ ಅಂಕಗಳ ಮರುಎಣಿಕೆಗಾಗಿ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು, ಅಂತಹ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು **ಪ್ರತಿ** ವಿಷಯಕ್ಕೆ **ರೂ. 100/–** ಗಳನ್ನು "ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು", ಇವರಿಗೆ ಸಂದಾಯವಾಗುವಂತೆ ಪಡೆದ ಡಿಡಿ/ಐಪಿಓ ಮೂಲಕ ಸಂದಾಯ ಮಾಡತಕ್ಕದ್ದು ಹಾಗೂ ಅದನ್ನು ತನ್ನ ಹೆಸರು, ಪರೀಕ್ಷಾ ಕೇಂದ್ರ, ನೋಂದಣಿ ಸಂಖ್ಯೆ ಮತ್ತು ಮರು ಎಣಿಕೆ ಮಾಡಬೇಕಾದ ವಿಷಯದ ವಿವರಗಳನ್ನು ನಮೂದಿಸಿದ ಅರ್ಜಿಯೊಂದಿಗೆ ಲಗತ್ತಿಸಿ ಒದಗಿಸತಕ್ಕದ್ದು.

(ಬಿ) ಅಭ್ಯರ್ಥಿಯು ಪಡೆದ ಅಂಕಗಳ ಮರು ಎಣಿಕೆಯ ಸಂಬಂಧದಲ್ಲಿ ಆಯೋಗದ ನಿರ್ಣಯವೇ ಅಂತಿಮವಾಗಿರುತ್ತದೆ.

**16. ಅನುಲೇಖನ ಸಹಾಯ:**

ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್‌ಎಸ್‌ಸಿ 75, ದಿನಾಂಕ 5ನೇ ಜುಲೈ 1978ರ ಅನುಸಾರವಾಗಿ ಅಂಧರಾಗಿರುವ ಅಥವಾ ತನ್ನ ಸ್ವಂತ ಕೈಯಿಂದ ಬರೆಯಲು ಅಸಮರ್ಥರಾದ ಅಭ್ಯರ್ಥಿಗಳಿಗೆ ಈ ಮುಂದಿನ ಷರತ್ತುಗಳಿಗೊಳಪಟ್ಟು ಒಬ್ಬ ಅನುಲೇಖಕನ ಸಹಾಯವನ್ನು ಪಡೆಯುವುದಕ್ಕೆ ಅನುಮತಿಸಲಾಗಿದೆ:

1. ಅನುಲೇಖಕನ ಸಹಾಯವನ್ನು ಬಯಸುವ ಅಭ್ಯರ್ಥಿಯು ಅರ್ಜಿಯ ಜೊತೆಗೆ ಸರ್ಕಾರಿ ಆಸ್ಪತ್ರೆಯ ವೈದ್ಯಾಧಿಕಾರಿಗಳು/ವೈದ್ಯಕೀಯ ತಜ್ಞರುಗಳಿಂದ ನೀಡಲಾದ ಒಂದು ಪ್ರಮಾಣ ಪತ್ರದೊಂದಿಗೆ ಅವನ ಮೇಲಧಿಕಾರಿಯ ಮೂಲಕ ಕಳುಹಿಸತಕ್ಕದ್ದು.
2. ಮೇಲಧಿಕಾರಿಯು ವೈದ್ಯಕೀಯ ಪ್ರಮಾಣಪತ್ರವನ್ನು ಆಯೋಗಕ್ಕೆ ಕಳುಹಿಸುವ ಮೊದಲು ಅಭ್ಯರ್ಥಿಯು ನಿಜವಾ ಅಸಮರ್ಥನಾಗಿರುವನೆ ಮತ್ತು ಅವನಿಗೆ ಅನುಲೇಖಕನ ಸಹಾಯ ಅವಶ್ಯವಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3. ಆಯೋಗವು ಅನುಲೇಖಕನ ಸಹಾಯಕ್ಕೆ ಮಂಜೂರಾತಿ ನೀಡಿದಾಗ ಸಂಬಂಧಪಟ್ಟ ಕೇಂದ್ರದ ಮೇಲ್ವಿಚಾರಕರು ಅಭ್ಯರ್ಥಿಗೆ ಒಬ್ಬ ಅನುಲೇಖಕನನ್ನು ನೇಮಕ ಮಾಡತಕ್ಕದ್ದು ಮತ್ತು ಅದನ್ನು ಕಾರ್ಯದರ್ಶಿ ಮತ್ತು ಇಲಾಖಾ ಪರೀಕ್ಷೆಯ ನಿಯಂತ್ರಣಾಧಿಕಾರಿಗೆ ತಿಳಿಸತಕ್ಕದ್ದು.
4. ಹಾಗೆ ನೇಮಕ ಮಾಡಲಾದ ಅನುಲೇಖಕನು ಅಭ್ಯರ್ಥಿಗಿಂತ ಕೆಳಗಿನ ದರ್ಜೆಯವನು ಅಥವಾ ಕಡಿಮೆ ಶಿಕ್ಷಣ ಪಡೆದವನು ಆಗಿರತಕ್ಕದ್ದು ಮತ್ತು ಅವನು ಅಭ್ಯರ್ಥಿಯ ಸಂಬಂಧಿಕನಾಗಿರಬಾರದು.
5. ಅಭ್ಯರ್ಥಿಗಳು ಪರೀಕ್ಷೆಯ ಪ್ರತಿಯೊಂದು ಪತ್ರಿಕೆಗೆ ರೂ. 5/–(ಐದು ರೂಪಾಯಿಗಳು) ಮೊತ್ತವನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಸದರಿ ಮೊತ್ತವನ್ನು ಪರೀಕ್ಷೆಯ ಪತ್ರಿಕೆ ಮುಗಿದ ಕೂಡಲೇ ಅನುಲೇಖಕನಿಗೆ ಸಂದಾಯ ಮಾಡತಕ್ಕದ್ದು.
6. ಅನುಲೇಖಕನನ್ನು ನೇಮಕ ಮಾಡಲಾಗಿದ್ದರೆ ಅಂತಹ ಅಭ್ಯರ್ಥಿಗೆ ಹದಿನೈದು ನಿಮಿಷಗಳ ಹೆಚ್ಚಿನ ಕಾಲಾವಕಾಶವನ್ನು ನೀಡಲಾಗುವುದು.
7. ಅನುಲೇಖಕನ ಸಹಾಯ ಬಯಸುವ ಅಭ್ಯರ್ಥಿಗಳು ಅವಶ್ಯಕ ವೈದ್ಯಕೀಯ ಪ್ರಮಾಣ ಪತ್ರ ಮತ್ತು ಮೇಲಧಿಕಾರಿಗಳ ದೃಢೀಕರಣವನ್ನು ಆನ್‌ಲೈನ್ ಮೂಲಕ ಸಲ್ಲಿಸಿದ ಅರ್ಜಿಯ ಪ್ರತಿಯೊಂದಿಗೆ ಲಗತ್ತಿಸಿ ಕೂಡಲೇ ಆಯೋಗಕ್ಕೆ ಮನವಿಯನ್ನು ಸಲ್ಲಿಸತಕ್ಕದ್ದು.

8. ಅಭ್ಯರ್ಥಿಗಳು ಅನುಲೇಖಕನ ಸಹಾಯ ಕೋರಿ ಸಲ್ಲಿಸುವ ವೈದ್ಯಕೀಯ ಪ್ರಮಾಣ ಪತ್ರವನ್ನು ಅನುಮಾನಾಸ್ಪದ ಸಂದರ್ಭದಲ್ಲಿ ವೈದ್ಯಕೀಯ ಮಂಡಳಿಗೆ ಪರಿಶೀಲನೆಗಾಗಿ ಕಳುಹಿಸಲಾಗುವುದು, ಹಾಗೂ ಕೆಲವೊಂದು ಸಂದರ್ಭಗಳಲ್ಲಿ ಅವಶ್ಯಕವೆನಿಸಿದರೆ ಅಂತಹವರನ್ನು ವೈದ್ಯಕೀಯ ಪರಿಶೀಲನೆಗೂ ಗುರಿಪಡಿಸಲಾಗುವುದು. ಸುಳ್ಳು ಪ್ರಮಾಣಪತ್ರ ಹಾಜರುಪಡಿಸಿದ್ದು ಸಾಬೀತಾದ ಸಂದರ್ಭಗಳಲ್ಲಿ ಅಂತಹ ಅಭ್ಯರ್ಥಿಗಳ ಮೇಲೆ ನಿಯಮಾನುಸಾರ ಶಿಸ್ತಿನ ಕ್ರಮ ಜರುಗಿಸಲಾಗುವುದಲ್ಲದೆ ಅಂತಹವರ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**17. ನಕಲು ಪ್ರಮಾಣ ಪತ್ರ:**

ಅಭ್ಯರ್ಥಿಯು ವಿವಿಧ ವಿಷಯಗಳಲ್ಲಿ ಉತ್ತೀರ್ಣಗೊಂಡ ಬಗ್ಗೆ ಆಯೋಗದಿಂದ ಪಡೆಯಲಾದ ಮೂಲ ಪ್ರಮಾಣಪತ್ರವನ್ನು ಕಳೆದುಕೊಂಡಲ್ಲಿ ಅಂತಹ ಅಭ್ಯರ್ಥಿಗಳು ನಕಲು ಪ್ರಮಾಣಪತ್ರವನ್ನು ಪಡೆದು– ಕೊಳ್ಳಬಹುದಾಗಿದ್ದು, ಸದರಿ ಪ್ರಮಾಣಪತ್ರಕ್ಕಾಗಿ ಈ ಕೆಳಗೆ ಸೂಚಿಸಿರುವ ಮಾಹಿತಿ/ದಾಖಲೆಗಳನ್ನು ಆಯೋಗಕ್ಕೆ ಒದಗಿಸುವ ಅಗತ್ಯವಿರುತ್ತದೆ.

1. ನಕಲು ಪ್ರಮಾಣ ಪತ್ರಕ್ಕೆ ಅರ್ಜಿ ಸಲ್ಲಿಸಲು ಕಾರಣಗಳನ್ನು ತಿಳಿಸುವ ಹಾಗೂ ಪರೀಕ್ಷಾ ವಿವರಗಳನ್ನೊಳಗೊಂಡ ರೂ. 20/– ಮೌಲ್ಯದ ಮುದ್ರಾಂಕ ಕಾಗದದ ಮೇಲೆ ನೋಟರಿಯವರ ಮುಂದೆ ಪ್ರಮಾಣೀಕರಿಸಲಾದ ಅಫಿಡವಿಟ್‌ನ ಮೂಲ ಪ್ರತಿ ಹಾಗೂ;
2. ಪ್ರತಿ ವಿಷಯ ಒಂದಕ್ಕೆ 100–00 ರೂ. ನಂತೆ ಶುಲ್ಕವನ್ನು ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇವರಿಗೆ ಸಂದಾಯವಾಗುವಂತೆ ಬ್ಯಾಂಕ್ ಡಿ.ಡಿ./ಅಂಚೆ ಧನಾದೇಶ(ಐ.ಪಿ.ಓ)
3. ಪ್ರವೇಶಪತ್ರದ ನೆರಳಚ್ಚು ಪ್ರತಿ ಮತ್ತು
4. ಪರೀಕ್ಷೆಯಲ್ಲಿ ಉತ್ತೀರ್ಣಗೊಂಡ ಬಗ್ಗೆ ವಿವರಗಳನ್ನು ನಮೂದಿಸಿರುವ ಸೇವಾ ಪುಸ್ತಕದ ಉದ್ಧೃತ ಭಾಗದ ನೆರಳಚ್ಚುಪ್ರತಿ.

**18. ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಸರ್ಕಾರದಿಂದ ಇತ್ತೀಚೆಗೆ ಜಾರಿಗೊಂಡಿರುವ ಸರ್ಕಾರಿ ಆದೇಶಗಳು:**

**(1)** Karnataka Civil Services (Service and Kannada Language Examinations) Rules, 1974

(1) A Government servant who has passed-

**(a)** the Secondary School Leaving Certificate Examination or any examination declared as equivalent thereto by the State Government, or any examination higher than the Secondary School Leaving Certificate Examination,

**(i)** in which the question papers on different subjects are answered in Kannada Language; or

**(ii)** in which Kannada is the main language, Second Language or an optional subject, but not one of the subject in a composite paper ,or

**(aa)** Diploma Course/Certificate Course in Kannada conducted by a University established by Law in India, or " Kava", " Jana" or "Rathna" examinations conducted by Kannada Sahitya Parishat.

**(ab)** Correspondence course in Kannada conducted by the Central Institute of Indian Languages, Mysore.

**(2) ಸರ್ಕಾರಿ ಅಧಿಸೂಚನೆ ಸಂಖ್ಯೆ. ಸಿಆಸುಇ 3 ಸೆಸೆನಿ 2010, ಬೆಂಗಳೂರು, ದಿನಾಂಕ:02–02–2011.**

"(ಎಸಿ) ಕರ್ನಾಟಕ ಸಿವಿಲ್ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು, 2006ರಲ್ಲಿ ನಿಗದಿಪಡಿಸಿರುವಂತೆ, ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಮಾಡುವ ನೇಮಕಾತಿಗೆ, ಆಯ್ಕೆ ಪರೀಕ್ಷೆಯ ಒಂದು ಭಾಗವಾಗಿ ಲೋಕಸೇವಾ ಆಯೋಗ ಅಥವಾ ಇತರೆ ಯಾವುದೇ ಆಯ್ಕೆ ಪ್ರಾಧಿಕಾರ ನಡೆಸುವ ಕನ್ನಡಭಾಷಾ ಪರೀಕ್ಷೆ".

**(3)** any examination specified in Schedule III as equivalent to the Kannada Language Examination, or who has won a prize in Kannada essay competition conducted by any University established by law, shall on obtaining a certificate of exemption under sub-rule (5) be deemed to have passed the Kannada Language Examination under these rules.

**(4) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987ರ**

ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್‌ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿ ನೀಡಲಾಗಿದೆ.

**19. ಅಭ್ಯರ್ಥಿಗಳಿಗೆ ವಿಶೇಷ ಸೂಚನೆಗಳು:–**

1. ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001 ಈ ವಿಳಾಸಕ್ಕೆ ಮಾಡತಕ್ಕದ್ದು.
2. ಪರೀಕ್ಷೆಗಳ ಸಂಬಂಧದಲ್ಲಿ ಯಾವುದೇ ಮಾಹಿತಿ ಕೋರುವ ಅಭ್ಯರ್ಥಿಗಳು ಮನವಿಯಲ್ಲಿ ಎಲ್ಲಾ ಮಾಹಿತಿ ನೀಡಿ ಅದರೊಂದಿಗೆ ಸಾಕಷ್ಟು ಅಂಚೆ ಚೀಟಿಗಳನ್ನು ಹಚ್ಚಿದ ಸ್ವವಿಳಾಸ ಬರೆದ ಒಂದು ಲಕೋಟೆಯನ್ನು ಲಗತ್ತಿಸಿ ಕಳುಹಿಸಿಕೊಟ್ಟಲ್ಲಿ ಆಯೋಗವು ತುರ್ತಾಗಿ ಉತ್ತರವನ್ನು ನೀಡಲು ಅನುಕೂಲವಾಗುವುದು.
3. ಮಾಹಿತಿಗಾಗಿ ಅಭ್ಯರ್ಥಿಗಳು ಆಯೋಗಕ್ಕೆ ಸಲ್ಲಿಸುವ ಮನವಿಗಳಲ್ಲಿ ನೋಂದಣಿ ಸಂಖ್ಯೆ, ಅಧಿವೇಶನ, ವಿಷಯ ಮತ್ತು ಪರೀಕ್ಷಾಕೇಂದ್ರ ಮುಂತಾದ ಸ್ಪಷ್ಟ ವಿವರಗಳನ್ನು ಸೂಚಿಸದಿದ್ದಲ್ಲಿ ಅಂತಹವುಗಳನ್ನು ಪುರಸ್ಕರಿಸಲಾಗುವುದಿಲ್ಲ.
4. ಅಭ್ಯರ್ಥಿಗಳು ಪೊಲೀಸ್ ಅಥವಾ ಇನ್ನಾವುದೇ ಸಮವಸ್ತ್ರವನ್ನು ಧರಿಸಿ ಪರೀಕ್ಷೆ ಬರೆಯುವುದನ್ನು ನಿಷೇಧಿಸಲಾಗಿದೆ.
5. ಅಭ್ಯರ್ಥಿಗಳು ತಮ್ಮೊಂದಿಗೆ ಸಹ ನೌಕರರನ್ನು/ಇತರರನ್ನು ಪರೀಕ್ಷಾ ಕೊಠಡಿಯೊಳಗೆ ಕರೆತರುವುದನ್ನು ಮತ್ತು ಪರೀಕ್ಷೆ ನಡೆಯುತ್ತಿರುವಾಗ ಅವರನ್ನು ಭೇಟಿ ಮಾಡಲು ಕೋರುವುದನ್ನು ನಿಷೇಧಿಸಲಾಗಿದೆ.

6. ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯೊಳಗೆ ಮೊಬೈಲ್ ಫೋನ್ ಹಾಗೂ ಇತರೆ ಎಲೆಕ್ಟ್ರಾನಿಕ್ ಉಪಕರಣಗಳನ್ನು ತರುವುದನ್ನು ಮತ್ತು ಉಪಯೋಗಿಸುವುದನ್ನು ಕಡ್ಡಾಯವಾಗಿ ನಿಷೇಧಿಸಲಾಗಿದೆ.
7. ಅಭ್ಯರ್ಥಿಗಳು ತಮಗೆ ಕಾಯ್ದಿರಿಸಿದ ಸ್ಥಳದಲ್ಲಿ ಮಾತ್ರ ಕುಳಿತು ಪರೀಕ್ಷೆ ಬರೆಯತಕ್ಕದ್ದು. ತಪ್ಪಿದಲ್ಲಿ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸಲಾಗುವುದು.
8. ಯಾವುದೇ ಹುದ್ದೆಗೆ ಕಡ್ಡಾಯಗೊಳಿಸಿದ ವಿಷಯಗಳ ಪೈಕಿ ಈ ಅಧಿಸೂಚನೆಯೊಂದಿಗೆ ಪ್ರಕಟಿಸಿದ ವೇಳಾಪಟ್ಟಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯಗಳು ಒಂದೇ ದಿನ, ಒಂದೇ ಸಮಯದಲ್ಲಿ ನಡೆಯುವಂತಿದ್ದರೆ, ಅವುಗಳಲ್ಲಿ ಒಂದಕ್ಕೆ ಮಾತ್ರ ಅರ್ಜಿ ಸಲ್ಲಿಸಿ ಪರೀಕ್ಷೆಗೆ ಹಾಜರಾಗತಕ್ಕದ್ದು.
9. ಪಠ್ಯ ಕ್ರಮಕ್ಕಾಗಿ ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ (ಸೇವೆ ಮತ್ತು ಕನ್ನಡಭಾಷಾ ಪರೀಕ್ಷೆಗಳು) ನಿಯಮಗಳು, 1974 ಮತ್ತು ಅದಕ್ಕೆ ಸರ್ಕಾರದಿಂದ ಕಾಲಕಾಲಕ್ಕೆ ಹೊರಡಿಸಲಾಗಿರುವ ತಿದ್ದುಪಡಿಗಳನ್ನು ನೋಡಬಹುದು.

**ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:**

| ಶಾಖೆಗಳು | ದೂರವಾಣಿ ಸಂಖ್ಯೆಗಳು |
|---|---|
| ಮಾಹಿತಿ ಕೇಂದ್ರ | **080–30574957** |
| ಇಲಾಖಾ ಪರೀಕ್ಷಾ ಶಾಖೆ–1 | **080–30574944** |
| ಇಲಾಖಾ ಪರೀಕ್ಷಾ ಶಾಖೆ–2 | **080–30574945** |
| ಪ್ರಾಂತೀಯ ಕಛೇರಿ ಬೆಳಗಾವಿ | **0831–2475345** |
| ಪ್ರಾಂತೀಯ ಕಛೇರಿ ಗುಲ್ಬರ್ಗಾ | **08472–227944** |
| ಪ್ರಾಂತೀಯ ಕಛೇರಿ ಮೈಸೂರು | **0821–2545956** |
| ಪ್ರಾಂತೀಯ ಕಛೇರಿ ಶಿವಮೊಗ್ಗ | **08182–228099** |
| ಸಹಾಯವಾಣಿ | **080–30574913** |

**20. ದುರ್ವರ್ತನೆ:**

ಯಾವುದೇ ಒಬ್ಬ ಅಭ್ಯರ್ಥಿಯು ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟಂತೆ ಕೃತ್ರಿಮ ದಸ್ತಾವೇಜನ್ನು ಅಥವಾ ಅಕ್ರಮವಾಗಿ ತಿದ್ದಿದ ದಸ್ತಾವೇಜುಗಳನ್ನು ಸಲ್ಲಿಸಿದ ಅಥವಾ ಸರಿಯಲ್ಲದ ಅಥವಾ ಸುಳ್ಳು ವಿವರಣೆಯನ್ನು ನೀಡಿದ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದ ಅಥವಾ ಪರೀಕ್ಷೆಯಲ್ಲಿ ಅಕ್ರಮ ವಿಧಾನವನ್ನು ಅನುಸರಿಸಲು ಪ್ರಯತ್ನಿಸಿದ ಅಥವಾ ಬೇರೆ ರೀತಿಯಲ್ಲಿ ಇತರೆ ಯಾವುದೇ ಅಕ್ರಮ ಅನುಚಿತ ಮಾರ್ಗವನ್ನನುಸರಿಸಿದ ಅಪರಾಧವನ್ನು ಮಾಡಿರುವುದಾಗಿ ಆಯೋಗಕ್ಕೆ ಕಂಡುಬಂದಲ್ಲಿ, ಅಂತಹ ಅಭ್ಯರ್ಥಿಯನ್ನು ಕ್ರಿಮಿನಲ್ ವ್ಯವಹರಣೆಗೆ ಗುರಿಪಡಿಸುವುದಲ್ಲದೆ (ಎ) ಅಭ್ಯರ್ಥಿಯ ಆಯ್ಕೆಗಾಗಿ ಆಯೋಗದಿಂದ ನಡೆಸಲಾಗುವ ಯಾವುದೇ ಪರೀಕ್ಷೆಗೆ ಪ್ರವೇಶ ನೀಡುವುದಕ್ಕೆ ಅಥವಾ ಯಾವುದೇ ಸಂದರ್ಶನಕ್ಕೆ ಹಾಜರಾಗುವುದಕ್ಕೆ ಖಾಯಂ ಆಗಿ ಅಥವಾ ಒಂದು ನಿರ್ದಿಷ್ಟ ಅವಧಿಗೆ ಅನರ್ಹಗೊಳಿಸಲಾಗುವುದು ಮತ್ತು (ಬಿ) ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು.

ಅಭ್ಯರ್ಥಿಗಳು ಪರೀಕ್ಷಾ ಕೇಂದ್ರದಲ್ಲಿ ಸಂವೀಕ್ಷಕರು/ಮೇಲ್ವಿಚಾರಕರು ನೀಡುವ ಸೂಚನೆಗಳನ್ನು ತಪ್ಪದೇ ಪಾಲಿಸುವುದು ತಪ್ಪಿದಲ್ಲಿ ಅದನ್ನು ದುರ್ವರ್ತನೆಯನ್ನಾಗಿ ಪರಿಗಣಿಸಲಾಗುವುದು ಮತ್ತು ಈ ಬಗ್ಗೆ ಶಿಸ್ತಿನ ಕಾರ್ಯವಿಧಾನಗಳಿಗೆ ಒಳಪಡಿಸಲಾಗುವುದು.

**ಕೆ.ಆರ್. ಸುಂದರ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗ," ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇಪ(1)47/2013–14/ಪಿಎಸ್‌ಸಿ, ದಿನಾಂಕ: 08–05–2013**

**ಅನುಬಂಧ " ಎ "**

**2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ.**

| ಕ್ರ.ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1 | 2 | 3 | 4 | 5 |
| 1. | ಶನಿವಾರ | **10–08–2013** | ಬೆಳಿಗ್ಗೆ 10.00 ರಿಂದ 12–00 ಗಂಟೆ | ಅಕೌಂಟ್ಸ್ ಲೋಯರ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ– **II** |
| 2 | ಭಾನುವಾರ | **11–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–**2** |
| 3. | ಸೋಮವಾರ | **12–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಜನರಲ್ ಲಾ ಭಾಗ– **I** ಪತ್ರಿಕೆ– **1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ– **I** ಪತ್ರಿಕೆ– **2** |
| 4. | ಮಂಗಳವಾರ | **13–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಕನ್ನಡ ಪತ್ರಿಕೆ–**1** (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 3.00 ಗಂಟೆ | ಕನ್ನಡ ಪತ್ರಿಕೆ–**2** (ಪುಸ್ತಕಗಳಿಲ್ಲದೆ) |

| ಕ್ರ.ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 5. | ಬುಧವಾರ | **14–08–2013** | ಬೆಳಿಗ್ಗೆ 10.00 ರಿಂದ 1.00 ಗಂಟೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–**2** (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ– **I** ಪತ್ರಿಕೆ–**1**, (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ–**2** {ಪುಸ್ತಕಗಳಿಲ್ಲದೆ} |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–**2**, |
| 6 | ಶುಕ್ರವಾರ | **16–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಲೇಬರ್ ಪತ್ರಿಕೆ–**1** |
| | | | ಮೇಲಿನಂತೆ | ಪ್ರಿಸನ್ಸ್ |
| | | | ಮೇಲಿನಂತೆ | ಎಕ್ಸೈಸ್ |
| | | | ಮೇಲಿನಂತೆ | ಮೋಟಾರ್ ವೆಹಿಕಲ್ಸ್ |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ– I ಪತ್ರಿಕೆ–**1** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00ಗಂಟೆ | ಲೇಬರ್ ಪತ್ರಿಕೆ–**2** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**2** |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ– I ಪತ್ರಿಕೆ–**2.** |
| 7. | ಶನಿವಾರ | **17–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ರೆವಿನ್ಯೂ ಹೈಯರ್ ಭಾಗ– II ಪತ್ರಿಕೆ–**1** |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–**1** |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– I ಪತ್ರಿಕೆ–**1** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**3** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ರೆವಿನ್ಯೂ ಹೈಯರ್ ಭಾಗ– II ಪತ್ರಿಕೆ–**2** |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–**2** |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– I, ಪತ್ರಿಕೆ–**2** |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–**1** |
| 8. | ಭಾನುವಾರ | **18–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪೊಲೀಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಕೋ–ಆಪರೇಷನ್ ಪತ್ರಿಕೆ–**1** |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–**1** |
| | | | ಮೇಲಿನಂತೆ | ಮೈನಿಂಗ್ ಭಾಗ– **I** |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ– **I**, ಪತ್ರಿಕೆ–**3** ಮತ್ತು – ಕೋ–ಆಪರೇಷನ್ ಪತ್ರಿಕೆ–**2** (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–**3** |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–**2** |
| | | | ಮೇಲಿನಂತೆ | ಮೈನಿಂಗ್ ಭಾಗ– **II** |
| | | | | ರೆವಿನ್ಯೂ ಲೋಯರ್ ಪತ್ರಿಕೆ–**2** |

| ಕ್ರ.ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 9. | ಸೋಮವಾರ | **19–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಸಿರಿಕಲ್ಚರ್ ಪತ್ರಿಕೆ**–1** |
| | | | ಮೇಲಿನಂತೆ | ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ– I |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ**–3** |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ–II ಪತ್ರಿಕೆ**–1** |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ**–1** |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ**–1** |
| | | | ಮೇಲಿನಂತೆ | ಪೋರ್ಟ್ಸ್ ಹೈಯರ್ |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ**–1** |
| | | | ಮೇಲಿನಂತೆ | ಯೂಥ್ ಸರ್ವೀಸಸ್ ಮ್ಯಾನ್ಯುಯಲ್ |
| | | | ಮಧ್ಯಾಹ್ನ 2.00ರ ರಿಂದ ಸಂಜೆ 4.00 ಗಂಟೆ | ಸಿರಿಕಲ್ಚರ್ ಪತ್ರಿಕೆ**–2** |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ–I,ಪತ್ರಿಕೆ**–2** |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ**–2** |
| | | | ಮೇಲಿನಂತೆ | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–II |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ–II ಪತ್ರಿಕೆ**–2** |
| | | | ಮೇಲಿನಂತೆ | ಪೋರ್ಟ್ಸ್ ಲೋಯರ್ |
| 10 | ಮಂಗಳವಾರ | **20–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್ ಪತ್ರಿಕೆ–1 |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ**–3** |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ–II,ಪತ್ರಿಕೆ**–1** |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಲೋಯರ್ ಪತ್ರಿಕೆ**–1** |
| | | | ಮೇಲಿನಂತೆ | ಆಕ್ಟ್ಸ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವೆಲಪ್‌ಮೆಂಟ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್ ಲಾಸ್ ಪತ್ರಿಕೆ–2 |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ–II, ಪತ್ರಿಕೆ**–2** |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಲೋಯರ್ ಪತ್ರಿಕೆ**–2** |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಷನ್ ಪತ್ರಿಕೆ–1 |
| 11 | ಬುಧವಾರ | **21–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪಿ.ಡಬ್ಲ್ಯೂಡಿ. ಲೋಯರ್ ಪತ್ರಿಕೆ**–1** |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– I |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ**–1** |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ**–2** |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ**–1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಹೋಂ ಗಾರ್ಡ್ಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ |

| ಕ್ರ.ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| | | | ಮೇಲಿನಂತೆ | ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– II |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–2 |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–2 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಷನ್ ಪತ್ರಿಕೆ–3 |
| | | | | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–2 |
| 12 | ಗುರುವಾರ | **22–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–1 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್, ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–2 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್, ಪತ್ರಿಕೆ–2 |

**ಕೆ. ಆರ್. ಸುಂದರ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)47/2013–14/ಪಿಎಸ್‌ಸಿ, ದಿನಾಂಕ: 08–05–2013**

**ಅನುಬಂಧ– " ಬಿ "**

**2013ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ.**

| ಕ್ರ.ಸಂ | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| **1** | **2** | **3** | **4** | **5** |
| 1. | ಸೋಮವಾರ | **26–08–2013** | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 1.00 ಗಂಟೆ | ಎಸ್.ಎ.ಎಸ್.ಭಾಗ– I, ಪತ್ರಿಕೆ–1 ಮತ್ತು ಎಲೆಕ್ಟ್ರಿಸಿಟಿ ಆಡಿಟ್ ಅಂಡ್ ಅಕೌಂಟ್ಸ್‌ಲಾಸ್ (ಹೈಯರ್) ಭಾಗ– II (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–1 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಕನ್ನಡ ಪತ್ರಿಕೆ–1(ಐಎಎಸ್,ಐಪಿಎಸ್ ಮತ್ತು ಐಎಫ್ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| | | | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಗಂಟೆ | ಸ್ಪೆಷಲ್ ಲಾಸ್ ಅಂಡ್ ಸರ್ವಿಸ್ ರೂಲ್ಸ್ |
| | | | ಮೇಲಿನಂತೆ | ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯುನಲ್ ಎಕ್ಸಾಮಿನೇಷನ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಎಸ್.ಎ.ಎಸ್.ಭಾಗ– I ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–2 (ಪುಸ್ತಕಗಳಿಲ್ಲದೆ) |

| ಕ್ರ.ಸಂ | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| **1** | **2** | **3** | **4** | **5** |
| | | | ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ<br>ಮೇಲಿನಂತೆ<br>ಮೇಲಿನಂತೆ | ಸೆಕ್ರೆಟೇರಿಯಟ್ ಮ್ಯಾನುಯಲ್ ಭಾಗ– **II**<br>ಟ್ರಾನ್ಸ್‌ಲೇಶನ್ ಟೆಸ್ಟ್ (ಪುಸ್ತಕಗಳಿಲ್ಲದೆ)<br>ಕನ್ನಡ ಪತ್ರಿಕೆ–**2** (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| 2. | ಮಂಗಳವಾರ | **27–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ<br><br>ಮೇಲಿನಂತೆ | ಎಸ್.ಎ.ಎಸ್. ಭಾಗ– **I** ಪತ್ರಿಕೆ–**3**<br>ಟ್ರೆಜರಿ ಅಕೌಂಟ್ಸ್ ಭಾಗ– **I** ಪತ್ರಿಕೆ–**3**<br>ಎಸ್.ಎ.ಎಸ್. ಭಾಗ– **II** ಪತ್ರಿಕೆ–**1** (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– **II** ಪತ್ರಿಕೆ–**1**<br>(ಎಲಿಮೆಂಟರಿ ಬುಕ್ ಕೀಪಿಂಗ್) |
| 3 | ಬುಧವಾರ | **28–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮೇಲಿನಂತೆ | ಎಸ್.ಎ.ಎಸ್. ಭಾಗ– **II** ಪತ್ರಿಕೆ–**2**<br>ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–**1**<br>ಟ್ರೆಜರಿ ಅಕೌಂಟ್ಸ್ ಭಾಗ– **II** ಪತ್ರಿಕೆ–**2** (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ<br>ಮೇಲಿನಂತೆ | ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–**2**<br>ಎಸ್.ಎ.ಎಸ್ ಭಾಗ– **II** ಪತ್ರಿಕೆ–**3**<br>ಟ್ರೆಜರಿ ಅಕೌಂಟ್ಸ್ ಭಾಗ– **II** ಪತ್ರಿಕೆ–**3** |
| 4. | ಗುರುವಾರ | **29–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ | ಎಸ್.ಎ.ಎಸ್. ಭಾಗ– **III** ಪತ್ರಿಕೆ–**1**<br>ಎಸ್.ಎ.ಎಸ್. ಭಾಗ– **III** ಪತ್ರಿಕೆ–**2** (ಪುಸ್ತಕಗಳಿಲ್ಲದೆ) |
| 5. | ಶುಕ್ರವಾರ | **30–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಸ್.ಎ.ಎಸ್. ಭಾಗ– **III** ಪತ್ರಿಕೆ–**3** |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ | ಎಸ್.ಎ.ಎಸ್. ಭಾಗ– **III** ಪತ್ರಿಕೆ–**4** (ಪುಸ್ತಕಗಳಿಲ್ಲದೆ)<br>ಎಲೆಕ್ಟ್ರಿಸಿಟಿ(ಆಡಿಟ್ ಅಂಡ್ ಅಕೌಂಟ್ಸ್)<br>ಲಾಸ್ ಲೋಯರ್ ಪರೀಕ್ಷೆ |
| 6. | ಶನಿವಾರ | **31–08–2013** | ಬೆಳಿಗ್ಗೆ 10.00 ರಿಂದ 12.00 ಗಂಟೆ<br><br>ಮೇಲಿನಂತೆ<br>ಮೇಲಿನಂತೆ<br><br>ಮೇಲಿನಂತೆ<br>ಮೇಲಿನಂತೆ | ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಹೈಯರ್ ಪರೀಕ್ಷೆ ಭಾಗ– **I**<br>ಎಸ್.ಎ.ಎಸ್ ಭಾಗ– **III** ಪತ್ರಿಕೆ–**5**<br>ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್<br>ಭಾಗ– **I** ಪತ್ರಿಕೆ–**1**<br>ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್<br>ಕರ್ನಾಟಕ ಲೋಕಸೇವಾ ಆಯೋಗ ಮ್ಯಾನ್ಯುಯಲ್ |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ | ಸೆಕ್ರೆಟೇರಿಯೆಟ್ ಮ್ಯಾನ್ಯುಯಲ್<br>ಭಾಗ– **I** ಪತ್ರಿಕೆ–**2**<br>ಕರ್ನಾಟಕ ಲೋಕಸೇವಾ ಆಯೋಗ ರಿಕ್ರೂಟ್‌ಮೆಂಟ್ ರೂಲ್ಸ್ |

**ಕೆ. ಆರ್. ಸುಂದರ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.

**PR.63**

## ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ನವನಗರ, ಹುಬ್ಬಳ್ಳಿ

### : ಮರು ಅಧಿಸೂಚನೆ :

**ಸಂಖ್ಯೆ : ಕರಾಕಾವಿ/ಬೋ.ಬೋ.ಕೇ/ಸಿಬ್ಬಂದಿ/ನೇಮಕಾತಿ/2012–13/2, ದಿನಾಂಕ :14–05–2013**

**ವಿಷಯ:** ಬೋಧಕೇತರ ಹುದ್ದೆಗಳ ನೇಮಕಾತಿ ಕುರಿತು :–

ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾನಿಲಯದಲ್ಲಿ ಖಾಲಿ ಇರುವ ಬೋಧಕೇತರ ಹುದ್ದೆಗಳನ್ನು ವೃಂದ ನೇಮಕಾತಿ ನಿಯಮಗಳನ್ವಯ ಭರ್ತಿಮಾಡಲು ಈ ವಿಶ್ವವಿದ್ಯಾಲಯದಿಂದ ದಿನಾಂಕ : 19–06–2012ರಂದು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅವುಗಳ ವಿವರ ಈ ಕೆಳಗಿನಂತೆ ಇರುವುದು.

| ಕ್ರ.ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ (ರೂ.ಗಳಲ್ಲಿ) | ವಿದ್ಯಾರ್ಹತೆ | ಹುದ್ದೆಗಳ ಸಂಖ್ಯೆ | ಮೀಸಲಾತಿ |
|---|---|---|---|---|
| 01 | Office Superintendent<br>ಕಛೇರಿ ಅಧೀಕ್ಷಕರು<br>22800–43200 | Degree of recognized University | 04 | SC-01-(Open)<br>ST-01-(Open)<br>GM-01-(Open)<br>GM-01-(Woman) |
| 02 | Stenographer<br>ಶೀಘ್ರಲಿಪಿಗಾರರು<br>17650–32000 | 3. A pass in SSLC examination or an equivalent qualification.<br>4. Senior type-writing & senior shorthand examination conducted by the Dept. of Public instruction or should be holder of Diploma in secretarial practice with shorthand typewriting as optional (Elective subjects) granted by the Board of Technical Education in Karnataka or should posses an equivalent qualification from any other Board. | 07 | SC-01-(Open)<br>ST-01-(Open)<br>Cat-I-01-(Open)<br>Cat-IIA-01 (Open)<br>GM-03 (Open-01, Woman-01, Rural-01) |
| 03 | Assistant<br>ಸಹಾಯಕರು<br>16000–29600 | A Degree from any recognized University. | 15 | SC-03-(Open-01. Woman-01, Rural-01,)<br>ST-01 (Open-1)<br>Cat-I -01 (Open-1)<br>IIA-02 (Open-01, Woman-01)<br>II B-01 (Open-01)<br>GM-07 (Open-02, Woman-02, Rural-02, PH (Hearing Impaired)-01) |
| 04 | Junior Assistants<br>ಕಿರಿಯ ಸಹಾಯಕರು<br>11600–21000 | A pass in SSLC or equivalent examination | 30 | SC-05-(Open-01. Woman-02, Rural-01, PH (Leprosy cured-01), ST-01 (Open-1)<br>Cat-I -01 (Open-1)<br>IIA-05 (Open-01, Woman-02, Rural-01, PH (Mentally ill)-01)<br>II B-01 (Open-01), III-A-01 (Open-01)<br>III-B-01 (Open-01), GM-15 (Open-03, Woman-05, Rural-04, PH (Locomotors Disability)-01, Kannada-01, Ex-Sr.-01) |
| 05 | Driver<br>ವಾಹನ ಚಾಲಕರು<br>11600–21000 | A pass in 7th standard or equivalent examination. Must be a holder of current driving license of light motor vehicle | 04 | SC-01-(Open)<br>ST-01-(Open)<br>GM-02-(Open-01, Woman-01) |
| | **ಒಟ್ಟು ಹುದ್ದೆಗಳು** | | **60** | |

ಆದರೆ, ನಿಗದಿತ ಕಾಲಾವಧಿಯ ಒಳಗೆ ಸದರ ಹುದ್ದೆಗಳನ್ನು ಭರ್ತಿಮಾಡದ ಕಾರಣ ಮರು ಅಧಿಸೂಚನೆಯನ್ನು ಪ್ರಚಲಿತ ಕಾನೂನುಗಳನ್ವಯ ಹೊರಡಿಸುವುದು ಅಗತ್ಯವಿದ್ದ ಕಾರಣ ಈ ಅಧಿಸೂಚನೆ.

ಮೇಲೆ ನಮೂದಿಸಿದ ಹುದ್ದೆಗಳ ಭರ್ತಿಗಾಗಿ ಈಗಾಗಲೇ ಅಭ್ಯರ್ಥಿಗಳಿಂದ ಸ್ವೀಕೃತವಾದ ಅರ್ಜಿಗಳನ್ನು ಅಧಿಸೂಚನೆಯಲ್ಲಿನ ಮಾಹಿತಿ ಹಾಗೂ ನಿಯಮಾವಳಿಗಳನ್ವಯ ಪರಿಶೀಲಿಸಿದಾಗ ಹಲವು ಅರ್ಜಿಗಳು ಸ್ವೀಕೃತ ಹಾಗೂ ತಿರಸ್ಕೃತಗೊಂಡಿರುತ್ತವೆ. ಹೀಗೆ ಸ್ವೀಕೃತವಾದ ಹಾಗೂ ತಿರಸ್ಕೃತಗೊಂಡ ಅರ್ಜಿಗಳ ವಿವರಗಳನ್ನು ಕಾರಣಗಳೊಂದಿಗೆ ಈ ವಿಶ್ವವಿದ್ಯಾಲಯದ ಸಾರ್ವತ್ರಿಕ ಪ್ರಾಧಿಕಾರದ www.kslu.ac.in ಜಾಲತಾಣದಲ್ಲಿ ಅಳವಡಿಸಲಾಗಿರುವುದು. ಕಾರಣ, ಈಗಾಗಲೇ ಅರ್ಜಿಗಳನ್ನು ಸಲ್ಲಿಸಿದ ಅಭ್ಯರ್ಥಿಗಳು ತಮ್ಮ ತಮ್ಮ ಅರ್ಜಿಗಳು ಸ್ವೀಕೃತಗೊಂಡಿವೆಯೋ ಹೇಗೆ ? ಎನ್ನುವ ವಿಷಯವನ್ನು ಈ ವಿಶ್ವವಿದ್ಯಾಲಯದ ಜಾಲತಾಣವನ್ನು ವೀಕ್ಷಿಸಿ ದೃಢಪಡಿಸಿಕೊಳ್ಳಬೇಕು. ಹೀಗೆ ಸಲ್ಲಿಸಲಾದ ಅರ್ಜಿಗಳ ಸ್ಥಿತಿ–ಗತಿಯನ್ನು ದೃಢೀಕರಿಸಿಕೊಂಡನಂತರ ಯಾವ ಅಭ್ಯರ್ಥಿಗಳ ಅರ್ಜಿಗಳು ಸ್ವೀಕೃತಗೊಂಡಿವೆಯೋ ಅಂತಹವರು ಪುನಃ ಅರ್ಜಿಗಳನ್ನು ಸಲ್ಲಿಸುವ ಅಗತ್ಯವಿರುವುದಿಲ್ಲ. ಆದರೆ, ಯಾವ ಯಾವ ಅಭ್ಯರ್ಥಿಗಳ ಅರ್ಜಿಗಳು ತಿರಸ್ಕೃತಗೊಂಡಿವೆಯೋ ಅಂತಹ ಅಭ್ಯರ್ಥಿಗಳು ಪುನಃ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ. ಇನ್ನು ಹೊಸದಾಗಿ ಅರ್ಜಿಯನ್ನು ಸಲ್ಲಿಸಲು ಬಯಸುವ ಅಭ್ಯರ್ಥಿಗಳು ಈ ಮೇಲೆ ನಮೂದಿಸಿದ ಹುದ್ದೆಗಳಿಗೆ ಸಂಬಂಧಿಸಿದಂತೆ ಅರ್ಜಿಗಳನ್ನು (8 ಪ್ರತಿಗಳಲ್ಲಿ) ನಿಗದಿತ ಶುಲ್ಕ, ಅಂಕಪಟ್ಟಿ ಹಾಗೂ ಇತರ ಅಡಕಗಳೊಂದಿಗೆ 8 ಸೆಟ್ಟುಗಳನ್ನು ಸಲ್ಲಿಸುವುದು ಕಡ್ಡಾಯ.

**ಹೆಚ್ಚುವರಿ ಮಾರ್ಗ ಸೂಚಿಗಳು :**

1. ಅರ್ಜಿಗಳೊಂದಿಗೆ ನಿಗದಿತ ಶುಲ್ಕದ ಡಿ.ಡಿಗಳನ್ನು ಲಗತ್ತಿಸದ ಹಾಗೂ ನಿಗದಿತ ನಮೂನೆಯಲ್ಲಿ ಇಲ್ಲದೇ ಇರುವ ಅರ್ಜಿಗಳನ್ನು ಹಾಗೂ ಅನ್ವಯಿಸುವ ಎಲ್ಲ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
2. ನಿಗದಿಪಡಿಸಿದ ಅರ್ಜಿನಮೂನೆಗಳನ್ನು 8 ಪ್ರತಿಗಳಲ್ಲಿ ಹಾಗೂ ಅವುಗಳೊಂದಿಗೆ ಲಗತ್ತಿಸಬೇಕಾದ ಅಂಕಪಟ್ಟಿ ಮತ್ತು ಇತರ ದಾಖಲಾತಿಗಳನ್ನು 8 ಪ್ರತಿಗಳಲ್ಲಿ ಸಲ್ಲಿಸುವುದು ಕಡ್ಡಾಯ.
3. ಅರ್ಜಿಗಳೊಂದಿಗೆ ಲಗತ್ತಿಸಲಾಗುವ ಅಂಕಪಟ್ಟಿ ಹಾಗೂ ಇತರ ದಾಖಲಾತಿಗಳ ಕನಿಷ್ಠ ಒಂದು ಸೆಟ್ಟಿಗಾದರೂ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಣಗೊಂಡಿರಬೇಕು. ಮಿಕ್ಕ 7 ಸೆಟ್ಟುಗಳು ಅವುಗಳ ನೆರಳು ಪ್ರತಿಗಳಾಗಿರಬಹುದು (ಮೂಲ ಭಾವಚಿತ್ರಗಳನ್ನು ಅರ್ಜಿಯ ಎಂಟೂ ಪ್ರತಿಗಳಲ್ಲಿ ಲಗತ್ತಿಸುವುದು ಕಡ್ಡಾಯ).
4. ಅಭ್ಯರ್ಥಿಗಳು ಅರ್ಜಿಯ ಎಂಟೂ ಪ್ರತಿಗಳಲ್ಲಿ ಪಾಸ್ ಪೋರ್ಟ ಅಳತೆಯ ಇತ್ತೀಚಿನ ತಮ್ಮ ಭಾವಚಿತ್ರಗಳನ್ನು ಗುರುತಿಸಿದ ಅಂಕಣದಲ್ಲಿ ಲಗತ್ತಿಸಬೇಕು.
5. ಅಭ್ಯರ್ಥಿಗಳು ಅರ್ಜಿಯ ಎಂಟು ಪ್ರತಿಗಳು ಪ್ರತಿಯೊಂದು ಅರ್ಜಿಯ ಅಭ್ಯರ್ಥಿಯ ಸಹಿ ಎಂದು ನಮೂದಿಸಿದ ಅಂಕಣದಲ್ಲಿ ತಮ್ಮ ಮೂಲ ಸಹಿಯನ್ನು ಮಾಡುವುದು ಕಡ್ಡಾಯ.

**ವಯೋಮಿತಿ :**

1. ಈ ಮರು ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಂದು ಅಭ್ಯರ್ಥಿಯು :

ಅ. ಕನಿಷ್ಠ ವಯೋಮಿತಿ : 18 ವರ್ಷ

| | | | |
|---|---|---|---|
| ಆ. ಗರಿಷ್ಟ ವಯೋಮಿತಿ : | ಸಾಮಾನ್ಯವರ್ಗ | .... | 35 ವರ್ಷ |
| | ಇತರೆ ಹಿಂದುಳಿದ ವರ್ಗ | .... | 38 ವರ್ಷ |
| | ಪ.ಜಾತಿ/ಪ.ಪಂ/ಪ್ರವರ್ಗ–1 | .... | 40 ವರ್ಷ |

**ಸೂಚನೆ :** ಯಾವ ಅಭ್ಯಥಿಗಳ ಅರ್ಜಿಗಳು ಈಗಾಗಲೇ ಸ್ವೀಕೃತಗೊಂಡಿವೆಯೋ ಅಂತಹ ಅಭ್ಯರ್ಥಿಗಳಿಗೆ ಮರು ಅಧಿಸೂಚನೆಯ ದಿನಾಂಕ ಅನ್ವಯಿಸುವುದಿಲ್ಲ. (ಸದರ ವಯೋಮಿತಿಯ ದಿನಾಂಕವು ಹೊಸದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳಿಗೆ ಮಾತ್ರ ಹಾಗೂ ಈಗಾಗಲೇ ಯಾವ ಅಭ್ಯರ್ಥಿಗಳ ಅರ್ಜಿಗಳು ತಿರಸ್ಕೃತಗೊಂಡಿವೆಯೋ ಅಂತಹ ಅಭ್ಯರ್ಥಿಗಳಿಗೂ ಅನ್ವಯಿಸುತ್ತದೆ.).

**ಅರ್ಜಿಯನ್ನು ಸಲ್ಲಿಸುಲು ಕೊನೆಯ ದಿನಾಂಕ : 13–06–2013.**

ಇನ್ನು ಮೂಲ ಅಧಿಸೂಚನೆಯ ಪತ್ರದ ದಿನಾಂಕ : 19–06–2012ರಲ್ಲಿ ನಮೂದಿಸಿದ ವಿವರಗಳು ಈ ವಿಶ್ವವಿದ್ಯಾಲಯ ಜಾಲತಾಣದಲ್ಲಿದ್ದು, ಅದರಲ್ಲಿ ಉಲ್ಲೇಖಿಸಲಾದ ಸಾಮಾನ್ಯ ಮಾಹಿತಿ, ಸೂಚನೆ ಇತ್ಯಾದಿ ವಿವರಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

Registrar,
Karnataka State Law University,
Navanagar, Hubli-580 025

**PD. 39**
**SC. 10**

# KARNATAKA STATE LAW UNIVERSITY, NAVANAGAR, HUBLI

## RE-NOTIFICATION FOR APPOINTMENT OF TEACHING STAFF

## NO KSLU/BOA(T)/CR-8/2013-14, Date : 14-05-2013

Applications were invited from all the eligible candidates for filling-up of Teaching post in this University under notification No. KSLU/BOA (T)/2012-13/0404 dated: 23-05-2012. The details of teaching post invited earlier are as under:

**Teaching Posts:**

| **Professors-02**<br>**Associate Professors-04** | | |
|---|---|---|
| 1 | SC | Open |
| 2 | GM | Open |
| 3 | ST | Open |
| 4 | GM | Women |
| 5 | CAT-I | Open |
| 6 | GM | Rural |

| **Assistant Professors-08** | | |
|---|---|---|
| 1 | SC | Open |
| 2 | GM | Open |
| 3 | ST | Open |
| 4 | GM | Woman |
| 5 | CAT-I | Open |
| 6 | GM | Rural |
| 7 | II-A | Open |
| 8 | GM | Open |

The process of filling-up of the above posts through recruitment was not completed within the time as per recruitment rules. As such, recruitment through re-notification is essential as required by the rules. Hence, this re-notifications.

The applications already received in this office, as per previous notification have been scrutinized on par with the conditions laid-down in the notification. On scrutiny it is found that, some applications have become eligible and some have become ineligible. The status of the applications received in this office is made available to the candidates in the website i.e. http:/www.kslu.ac.in. The applicants with rejected application status may apply afresh as no documents, testimonials of the previous application would be considered.

The other general conditions and information required for filling up of application forms are similar and unaltered as published in the earlier notification dated 23-05-2012 of this University.

**The last date for submission of application : 13-06-2013.**

Registrar,
Karnataka State Law University,
Navanagar, Hubli-580 025

**PD. 40**
**SC. 10**

## ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ನವನಗರ, ಹುಬ್ಬಳ್ಳಿ

### : ಮರು ಅಧಿಸೂಚನೆ :

**ಸಂಖ್ಯೆ : ಕರಾಕಾವಿ/ಬೋ.ಕೇ/ಸಿಬ್ಬಂದಿ/ನೇಮಕಾತಿ/2013-14, ದಿನಾಂಕ :14-05-2013**

**ವಿಷಯ:** ಬೋಧಕೇತರ (ಉಪಕುಲಸಚಿವರು ಹಾಗೂ ಸಹಾಯಕ ಕುಲಸಚಿವರು) ಹುದ್ದೆಗಳ ನೇಮಕಾತಿ ಕುರಿತು :-

ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾನಿಲಯದಲ್ಲಿ ಖಾಲಿ ಇರುವ ಬೋಧಕೇತರ (ಉಪಕುಲಸಚಿವರು ಹಾಗೂ ಸಹಾಯಕ ಕುಲಸಚಿವರು) ಹುದ್ದೆಗಳನ್ನು ನೇಮಕಾತಿ ನಿಯಮಗಳನ್ವಯ ಅಧಿಸೂಚನೆ ಸಂಖ್ಯೆ : ಕರಾಕಾವಿ/ಬೋ.ಕೇ/ಸಿಬ್ಬಂದಿ/ನೇಮಕಾತಿ/2012-13/1 ದಿನಾಂಕ : 15-06-2012 ಭರ್ತಿ ಮಾಡುವ ಕುರಿತು ಮರು ಅಧಿಸೂಚನೆಯನ್ನು ಹೊರಡಿಸಿದ್ದು ಅದರ ವಿವರ ಈ ಕೆಳಗಿನಂತೆ ಇರುವುದು.

| ಕ್ರ.ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ | ಮೀಸಲಾತಿ |
|---|---|---|---|
| 01 | Deputy Registrar (ಉಪ ಕುಲಸಚಿವರು) 36300-53850 | 01 | GM (Open) |
| 02 | Assistant Registrar (ಸಹಾಯಕ ಕುಲಸಚಿವರು) 28100-50100 | 02 | SC (Open)-1<br>GM (Open)-1 |
| | **ಒಟ್ಟು ಹುದ್ದೆಗಳು** | **03** | |

**ವಯೋಮಿತಿ :**

ಈ ಮರು ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಅಭ್ಯರ್ಥಿಯು : ಕನಿಷ್ಠ ವಯೋಮಿತಿ : 18 ವರ್ಷ, ಗರಿಷ್ಠ ವಯೋಮಿತಿ : ಸಾಮಾನ್ಯವರ್ಗ-35 ವರ್ಷ, ಇತರೆ ಹಿಂದುಳಿದ ವರ್ಗ-38 ವರ್ಷ, ಪ.ಜಾತಿ/ಪ.ಪಂ./ಪ್ರವರ್ಗ-1 40 ವರ್ಷ.

**ಸೂಚನೆ :** ಸದರ ವಯೋಮಿತಿಯ ದಿನಾಂಕವು ಹೊಸದಾಗಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳಿಗೆ ಹಾಗೂ ಈಗಾಗಲೇ ಯಾವ ಅಭ್ಯರ್ಥಿಗಳ ಅರ್ಜಿಗಳು ತಿರಸ್ಕೃತಗೊಂಡಿವೆಯೋ ಅಂತಹ ಅಭ್ಯರ್ಥಿಗಳಿಗೂ ಅನ್ವಯಿಸುತ್ತದೆ. **ಅರ್ಜಿಯನ್ನು ಸಲ್ಲಿಸಲು ಕೊನೆಯ ದಿನಾಂಕ : 13-06-2013**.

ಅಭ್ಯರ್ಥಿಗಳು ಸಂಪೂರ್ಣ ಮಾಹಿತಿಗಾಗಿ ಹಾಗೂ ಈ ಮೊದಲು ಸಲ್ಲಿಸಿದ ಅಭ್ಯರ್ಥಿಗಳ ಅರ್ಜಿಗಳು ಸ್ವೀಕೃತ ಹಾಗೂ ತಿರಸ್ಕೃತಗೊಂಡ ವಿವರವನ್ನು ಈ ವಿಶ್ವವಿದ್ಯಾಲಯದ ಜಾಲತಾಣ (website:http://www.kslu.ac.in ಮೂಲಕ ಮಾಹಿತಿ ಪಡೆದುಕೊಳ್ಳಬಹುದು.

Registrar,
Karnataka State Law University,
Navanagar, Hubli-580 025

**PD. 41**

**SC. 10**

ಸರ್ಕಾರಿ ಕೇಂದ್ರ ಮುದ್ರಣಾಲಯ, ಫಟಕ-2, ಬೆಂಗಳೂರು